# ಮುನ್ನುಡಿ

ಕಲಾವಿದರ ಚಿತ್ತ ಕಥೆಯನ್ನು ನಿರೂಪಿಸುವ ನನ್ನ ಕಾದಂಬರಿ ಮಾಲೆಯಲ್ಲದೆ ಸಾಮಾಜಿಕ ಜೀವನದ ವಿವಿಧ ಮುಖಗಳನ್ನು ತೋರುವ ಕಾದಂಬರಿಗಳನ್ನೂ ನಾನು ಬಹಳ ಹಿಂದೆಯೇ ಆರಂಭಿಸಿದೆ. 'ಜೀವನಯಾತ್ರೆ'— 'ಮಂಗಳ ಸೂತ್ರ' ಇವೆರಡೂ ಆ ವರ್ಗಕ್ಕೆ ಸೇರಬೇಕಾದವು. ಅಂತಹ ಕಾದಂಬರಿಗಳನ್ನು ಹೆಚ್ಚು ಹೆಚ್ಚಾಗಿ ಬರೆಯಬೇಕೆಂದು ಬಹು ಮಂದಿ ಓದುಗರು ಆಶಿಸಿದರು. ಒಂದೇ ಬಗೆಯ ಸಾಹಿತ್ಯ ನಿರ್ಮಾಣಕ್ಕೆ ಕ್ರಿಯಾಶಾಲಿ ಲೇಖಕ ಗಂಟು ಬಿದ್ದರೆ ಅದು ಅವನ ಕುತ್ತಾಗುತ್ತದೆಂಬುದು ಸಾಹಿತ್ಯೇತಿಹಾಸ ಸಿದ್ಧಮಾಡಿಕೊಟ್ಟಿರುವ ಸತ್ಯ. ಆ ಸತ್ಯದಲ್ಲಿ ನನಗೆ ನಂಬಿಕೆ ಇದೆ. ಒಂದು ತಂತ್ರ, ಒಂದು ಚಿತ್ರವನ್ನು ಬಳಸಿಕೊಂಡ ಮೇಲೆ ನಾನು ಕೆಲವು ಕಾಲ ಅದಕ್ಕೆ ಕೈಯಿಕ್ಕುವುದಿಲ್ಲ. ಇದರಿಂದ ನನ್ನ ಅಭಿಮಾನಿಗಳಾದ ಓದುಗರಿಗೆ ಸ್ವಲ್ಪ ಅಸಮಾಧಾನವಾಗುತ್ತದೆ.

ನಾಡಿಗೆಂಥ ಸಾಹಿತ್ಯ ಬೇಡಬೇಕೆಂದು ಚರ್ಚಿಸುತ್ತಾ ಮಹಾಜ್ಞಾನಿ ಪ್ಲೇಟೋ 'ಅನುಕರಣೀಯ ವ್ಯಕ್ತಿಜೀವನವನ್ನು' ಚಿತ್ರಿಸಬೇಕೆಂದು ತಿಳಿಸುತ್ತಾನೆ. ಸಮಾಜದ ಮುಂದೆ ಆದರ್ಶಗಳನ್ನೇ ಇಡಬೇಕು. ಲೋಪದೋಷಗಳನ್ನು ಅಣಕವಾಡಬೇಕಷ್ಟೆ ಎಂದು ಅವನ ಮತ. ಉದಾತ್ತ ಜೀವನ ಅರ್ಥವಾಗುವುದು ಉದಾತ್ತ ಜೀವಿಗೆ ಮಾತ್ರ. ಉದಾತ್ತ ಜೀವನದ ಮೇಲ್ಮೆ ಹಿರಿಮೆಗಳನ್ನು ಎಲ್ಲರೂ ಅರ್ಥಮಾಡಿಕೊಳ್ಳಬಲ್ಲರೆಂಬ ಮಾತು ಸತ್ಯಕ್ಕೆ ದೂರ. ಆದರೆ ಜನತೆಯಲ್ಲಿ ಅಂತರ್ಗತವಾಗಿರುವ ಸುಪ್ತಪ್ರತಿಭೆ ಉದಾತ್ತ ಜೀವನವನ್ನು ಅರ್ಥಮಾಡಿಕೊಳ್ಳಬಲ್ಲುದು. ಜನತೆಗೆ ಅರ್ಥವಾಗುವ ರೀತಿ ಹೇಳಬೇಕು. ಅರ್ಥವಾಗುವುದಕ್ಕೆ ಬೇಕಾದ ಅನುಕೂಲಗಳನ್ನು ಕಲ್ಪಿಸಿಕೊಡಬೇಕು.

ಉದಾತ್ತ ಜೀವನದ ಚಿತ್ರವನ್ನು ಜನತೆಯ ಮುಂದಿಡಬೇಕು ಎಂದು ಹೇಳುವಾಗ ಪ್ಲೇಟೋ ಅನುದಾತ್ತ ಜೀವನದ ಚಿತ್ರ ಗೌಣವಾದುದೆಂದು ಸಹಜವಾಗಿ ಭಾವಿಸುತ್ತಾನೆ. ಆಧುನಿಕ ವಿಚಾರಪರಂಪರೆ ಪ್ಲೇಟೋ ಮತವನ್ನು

ಒಪ್ಪುವುದಿಲ್ಲ. ಉದಾತ್ತ ಅನುದಾತ್ತ ಜೀವನಗಳ ಇಮ್ಮುಖವನ್ನು ತೋರಿಸದ ಬಗ್ಗೆ ಜನತೆಯಲ್ಲಿ ತಾರತಮ್ಯ ಜ್ಞಾನ ಬೆಳೆಯುವುದಿಲ್ಲ. ಸತ್ಯ ನಿರ್ಧಾರಕ್ಕೆ ತಾರತಮ್ಯ ಜ್ಞಾನ ಕೇವಲ ಆವಶ್ಯಕ. ಸಾಹಿತ್ಯ ಜೀವನದ ವಿಮರ್ಶೆಯಾಗಬೇಕಾದರೆ ಅದರ ಅನಂತ ಸ್ವರೂಪದರ್ಶನ ಜನತೆಗಾಗಬೇಕು.

"ಕಣ್ಣೀರು" ಕಾದಂಬರಿಯಲ್ಲಿ ಉದಾತ್ತ ಜೀವನದ ಚಿತ್ರಗಳನ್ನೇ ಹೆಚ್ಚಾಗಿ ಕೊಟ್ಟಿದ್ದೇನೆ. ಜೀವನ ಹಸನಾಗಬೇಕು, ಬಾಳು ಸಹ್ಯವಾಗಬೇಕು, ಮಾನವನಿಗೆ ಅವನ ನಿಜಾತ್ಮನ ಅರಿವಾಗಬೇಕೆಂದೇ ಎಲ್ಲ ಪ್ರಗತಿಶೀಲ ಸಾಹಿತಿಗಳ ಬಯಕೆ. ಗುರಿಯ ಸಾಧನೆಗೆ ಅಡ್ಡಿಯಾಗುವ ಕಂಟಕಗಳನ್ನು ಅವರು ನಿವಾರಿಸದೆ ಗತ್ಯಂತರವಿಲ್ಲ. ಪಾಪಾಸುಕಳ್ಳಿ ಬೆಳೆದಿರುವ ಪ್ರದೇಶದಲ್ಲಿ ತೋಟ ಮಾಡಹೋಗುವುದು ಮೌಢ್ಯ. ಆದರೆ ಪಾಪಾಸುಕಳ್ಳಿಯನ್ನು ಕಿತ್ತೊಗೆದು ತೋಟ ಬೆಳೆಸಬಹುದು.

ಸಾಮಾಜಿಕ ಜೀವನವನ್ನು ವಿಷಮಯ ಮಾಡುವ ಒಂದು ಸಮಸ್ಯೆಯನ್ನು 'ಕಣ್ಣೀರು' ನಲ್ಲಿ ಕಾಣಿಸಿದ್ದೇನೆ. ಪ್ರತಿ ಮನೆಯನ್ನೂ ಗೌರಿ, ಕಾಮಾಕ್ಷಿ, ಸುಶೀಲ, ರಂಗಮ್ಮ ಬೆಳಗಿಸುತ್ತಿದ್ದಾರೆ— ಆದರೆ ಆ ಬೆಳಕಿಗೆ ಫಣಿಯಮ್ಮನಂಥ ಕೀಟ ಹತ್ತಿರುತ್ತದೆ.

ನನ್ನ ಕೃತಿಯ ಬಗ್ಗೆ ಹೆಚ್ಚು ಹೇಳುವುದು ತಪ್ಪಾದೀತು. ಆದರಿದು ನನ್ನ ಓದುಗರಿಗೆ ಸ್ವಲ್ಪ ಹೊತ್ತಾದರೂ ನಿರ್ಮಲಾನಂದ ಕೊಡುವಂತಾಗಲಿ ಎಂದು ಬಯಸದಿದ್ದರೆ ಅದೂ ತಪ್ಪಾದೀತು.

ಕಾದಂಬರಿಯನ್ನು ತಮ್ಮ 'ಉಷಾ ಸಾಹಿತ್ಯಮಾಲೆ'ಗೆ ಸೇರಿಸಿಕೊಂಡು ಗೆಳೆಯರಾದ ರಾ. ನ. ಹಬ್ಬು ಮತ್ತು ರಾ. ವೆಂ. ಶ್ರೀನಿವಾಸರು ಉಪಕಾರ ಮಾಡಿದ್ದಾರೆ. ಈಗಾಗಲೇ ಉಷಾ ಸಾಹಿತ್ಯಮಾಲೆ ತನ್ನ ಅಪೂರ್ವ ಅಚ್ಚುಗಟ್ಟಿನಿಂದ ಕನ್ನಡನಾಡವರ ಪ್ರೇಮ, ಗೌರವಗಳನ್ನು ಸಂಪಾದಿಸಿಕೊಂಡಿದೆ. ಮಾಲೆ ಚಿರಕಾಲ ನಡೆದು ಕನ್ನಡ ತಾಯ ಕೊರಳಿಗೆ ಅನೇಕ ಮಾಲೆಗಳನ್ನು ಅರ್ಪಿಸಲೆಂದು ನನ್ನ ಹಾರೈಕೆ.

"ಅನ್ನಪೂರ್ಣ"
ವಿಶ್ವೇಶ್ವರಪುರ, ಬೆಂಗಳೂರುನಗರ
ಸಂಕ್ರಾಂತಿ, ೧೪–೧–೧೯೪೭

ಅ. ನ. ಕೃಷ್ಣರಾಯ

# ಎರಡನೆಯ ಮುದ್ರಣದ ಮುನ್ನುಡಿ

ನನ್ನ 'ಕಣ್ಣೀರು' ಕಾದಂಬರಿಯ ಮೊದಲನೆಯ ಮುದ್ರಣದ ಪ್ರತಿಗಳು ಮುಗಿದು ಒಂದು ವರ್ಷದ ಮೇಲಾಯಿತು. ಕಾರಣಾಂತರಗಳಿಂದ ಎರಡನೆಯ ಮುದ್ರಣ ಪ್ರಕಟಿಸುವುದು ತಡವಾಯಿತು.

ನನ್ನ ನಿರೀಕ್ಷೆಗೂ ಮಿಕ್ಕ ಸ್ವಾಗತ ಈ ಕಾದಂಬರಿಗೆ ಸಿಕ್ಕಿದುದು ನನಗೆ ತುಂಬ ಸಂತೋಷವನ್ನುಂಟುಮಾಡಿದೆ. ಓದುಗರ ಅಭಿಮಾನ ನನಗೆ ಧೈರ್ಯ ಸ್ಥೈರ್ಯಗಳನ್ನಿತ್ತಿವೆ.

'ಕಣ್ಣೀರು' ಕಾದಂಬರಿ ತಮಿಳಿಗೆ ಅನುವಾದಗೊಂಡು ಮದರಾಸಿನ ಸುಪ್ರಸಿದ್ಧ ದೈನಂದಿನ ಪತ್ರಿಕೆಯಾದ 'ದಿನಸರಿ'ಯ ವಾರಾಂತ್ಯದ ವಿಶೇಷ ಸಂಚಿಕೆಗಳಲ್ಲಿ ಕ್ರಮಾಗತವಾಗಿ ಪ್ರಕಟವಾಯಿತು. ಅನುವಾದ ಕೆಲಸವನ್ನು ಅಚ್ಚುಕಟ್ಟಾಗಿ ನಿರ್ವಹಿಸಿ ಸೋದರಿ ಸೌ. ಜಯಲಕ್ಷ್ಮೀ ಶ್ರೀನಿವಾಸನ್ ತಮಿಳು ಓದುಗರಿಗೆ ಕನ್ನಡ ಕಾದಂಬರಿಯೊಂದರ ಪರಿಚಯಮಾಡಿಕೊಟ್ಟು ಉಪಕಾರ ಮಾಡಿದ್ದಾರೆ. ಕಾದಂಬರಿಯನ್ನು 'ದಿನಸರಿ'ಯಲ್ಲಿ ಪ್ರಕಟಿಸಿ ಶ್ರೀ ತ. ನಾ. ಸುಬ್ರಹ್ಮಣ್ಯಂ ಅವರು ಕನ್ನಡ ತಮಿಳಿನ ಬಾಂಧವ್ಯವನ್ನು ಬೆಸಸಿದ್ದಾರೆ. ಈ ಇಬ್ಬರು ಸಹೃದಯರಿಗೆ ನನ್ನ ಕೃತಜ್ಞತೆ ಸಲ್ಲಬೇಕಾಗಿದೆ.

'ಸಾಹಿತ್ಯ ಕುಟೀರ' ಪ್ರಕಟನಾಲಯದ ಒಡೆಯರು ಈ ಕಾದಂಬರಿಯ ದ್ವಿತೀಯ ಮುದ್ರಣ ಪ್ರಕಟಿಸಿ ಉಪಕಾರ ಮಾಡಿದ್ದಾರೆ. ಅವರಿಗೂ ಗ್ರಂಥವನ್ನು ಮುದ್ರಿಸಿ ಕೊಟ್ಟಿರುವ ಈಸ್ಟರ್ನ್ ಪ್ರೆಸ್ ಒಡೆಯರಾದ ಶ್ರೀ ಎಂ. ಎಸ್. ಚಿಂತಾಮಣಿ ಅವರಿಗೂ ನನ್ನ ಕೃತಜ್ಞತೆ ಸಲ್ಲಬೇಕಾಗಿದೆ.

"ಅನ್ನಪೂರ್ಣ", ವಿಶ್ವೇಶ್ವರಪುರಂ,
ಬೆಂಗಳೂರುನಗರ. ೭-೭-೧೯೪೯

ಅ. ನ. ಕೃಷ್ಣರಾಯ

# ಕಣ್ಣೀರು

## ೧

ರಂಗಮ್ಮ ಮಗಳಿಗೆ ಜಡೆಹೆಣೆಯುತ್ತ ಕುಳಿತಿದ್ದರು. ಮೂರು ನಿಮಿಷದಲ್ಲಿ ಮುಗಿಯುವ ಜಡೆ ಕಾಲುಗಂಟೆಯಾದರೂ ಮುಗಿದಿರಲಿಲ್ಲ. ಬಾಚಿದ ಕೂದಲನ್ನೇ ಬಾಚುವರು, ಮತ್ತೆ ಮತ್ತೆ ನೀರು ಸವರುವರು. ಜಡೆ ಏನಾದರೂ ಮುಗಿಯುಲೊಲ್ಲದು. ಗೌರಿಗೆ ಬೇಸರವಾಗುತ್ತ ಬಂದಿತ್ತು.

"ಇನ್ನೂ ಮುಗಿಲಿಲ್ವೇಮ್ಮ" ಎಂದಳು.

"ಮುಗೀತು ಕಣೇ ತಾಯಿ."

ಎಂದು ಜಡೆ ಮುಗಿಸಿ, ಬಾಳೆನಾರಿನಿಂದ ತುದಿಯನ್ನು ಬಿಗಿದರು. ಮುಂದಲೆ ಬಾಚಿಸಿಕೊಳ್ಳಲು ಗೌರಿ ತಾಯಿ ಕಡೆ ತಿರುಗಿದಾಗ ಅವರ ಕಣ್ಣಲ್ಲಿ ನೀರಾಡುತ್ತಿದ್ದುದನ್ನು ಕಂಡಳು.

"ಯಾಕಮ್ಮಾ ಅಳುತ್ತಿದ್ದೀ?"

ತಾಯಿಗೆ ತಡೆದಿದ್ದ ದುಃಖ ಉಮ್ಮಳಿಸಿ ಬಂತು. ಬಿಕ್ಕಿಬಿಕ್ಕಿ ಅತ್ತರು. ಕಾರಣವೇನೆಂದು ಅರಿಯದಿದ್ದ ಗೌರಿ ತಾನೂ ಅಳತೊಡಗಿದಳು. ತನ್ನ ಲಂಗದ ತುದಿಯಿಂದ ತಾಯಿಯ ಕಣ್ಣೀರೊರಸಿದಳು. ತಾಯಿ ಕಣ್ಣೀರ ತೆರೆಯಿಂದಲೇ ಮಗಳನ್ನು ದಿಟ್ಟಿಸಿ ನೋಡಿದರು. ಗುಂಡು ಮುಖ. ತಿದ್ದಿದ ಕಣ್ಣು ಮೂಗು, ನೀಳವಾದ ಕೇಶರಾಶಿ. ಗೌರಿ ಗೌರಿಯೇ ಆಗಿದ್ದಳು. ಮಗಳ ಹಾಲುಕೆನ್ನೆಯ ಮೇಲೆ ಮೃದುವಾಗಿ ನೇವರಿಸಿದರು.

"ಈಚೆಗೆ ಯಾಕಮ್ಮಾ ಸುಮ್ಮನೆ ಕಣ್ಣೀರುಹಾಕುತ್ತೀ. ನಿನ್ನ ನೋಡಿ ನೋಡಿ ಅಣ್ಣಾನೂ ಸುಮ್ಮನೆ ನಿಟ್ಟುಸಿರುಬಿಡುತ್ತಾರೆ."

"ಹೋಗಲಿ. ನೀನು ಮುಖ ತೊಳೆದುಕೊಂಡು, ಹಣೆಗಿಟ್ಟುಕೊಂಡು ಆಡಿಕೋ ಹೋಗು ಗೌರಿ."

"ಊಹೂ—ನೀನು ಹೇಳೋತನಕ ನಾನು ಹೋಗೋದಿಲ್ಲ."

"ಏನು ಹೇಳಬೇಕೇ ತಾಯೀ."

"ಯಾಕೆ ಕಣ್ಣೀರು ಹಾಕುತ್ತೀ."

"ಹೆತ್ತ ಹೊಟ್ಟೆಸಂಕಟ. ಅರಿಯದ ಕಂದಮ್ಮ ನಿನಗೀಗಲೇ ಯಾಕೆ ವೆಲ್ಲಾ ತಾಪತ್ರಯ."

ಗೌರಿ ಖಿನ್ನಳಾದಳು. ತಾಯಿ ತನ್ನಿಂದ ಏನೋ ಮರೆಮಾಚುತ್ತಿದಾರೆಂದು ಅವಳ ಭಾವನೆ. ಅವಳಿಗೆ ತುಸು ಕೋಪವೂ ಬಂತು. ತಾಯಿಯ ಮುಖದ ಮೇಲಿನ ಬೆಳಕು ಕೋಪದ ಕಾರ್ಮೋಡವನ್ನು ಚೆದುರಿಸಿತು.

"ನಾಸಿವತ್ತು ಆಟಕ್ಕೆ ಹೋಗಲ್ಲಮ್ಮಾ."

"ಯಾಕೆ ಗೌರಿ?"

"ನೀನೊಬ್ಬಳೇ ಕೂತುಕೊಂಡು ಅಳುತ್ತಿರುತ್ತೀ."

"ಇಲ್ಲ ಹೋಗು. ಪಾತಕ್ಕ ಬರುತ್ತಾರೆ. ಹಪ್ಪಳದ ಹಿಟ್ಟು ಕಲಿಸಿದ್ದೀನಿ. ಕೈತುಂಬ ಕೆಲಸವಿದೆ."

ಗೌರಿ ಮನಸ್ಸಿಲ್ಲದೆ ಎದ್ದು ಹೋದಳು. ರಂಗಮ್ಮ ಎದ್ದು ವುತ್ತೆ ಸ್ನಾನ ತೀರಿಸಿ ಹಪ್ಪಳದ ಹಿಟ್ಟು, ಲಟ್ಟಿಗೆ, ಮಣೆ ಸಿದ್ಧಪಡಿಸಿಕೊಳ್ಳುವ ಹೊತ್ತಿಗೆ ಪಾತಕ್ಕ ಬಂದರು. ಇಬ್ಬರೂ ಹಪ್ಪಳ ಲಟ್ಟಿಸುವುದಕ್ಕಾರಂಭಿಸಿದರು.

"ರಂಗಮ್ಮ, ಗೌರಿ ಗಂಡಿನ ಸುದ್ದಿ ಏನಾಯಿತು.?"

"ಏನಾಯಿತೂಂತ ಹೇಳಲಿ ಪಾತಕ್ಕ. ತಿರುಗಿತಿರುಗಿ ಅವರ ಕಾಲೆರಡೂ ಸವೆದುಹೋದವು."

"ವಯಸ್ಸಾಗುತ್ತ ಬಂತಲ್ಲಮ್ಮಾ."

"ಹೌದು. ಅದಕ್ಕೆ ನಾನೇನುಮಾಡಲಿ ಹೇಳಿ, ದೇವರು ಗೌರೀಗೆ ಗಂಡು ಎಲ್ಲಿ ನಿರ್ಮಿಸಿದ್ದಾನೋ ಅವನೇ ಹೇಳಬೇಕು."

"ಗೌರಿ ಕೈ ಹಿಡಿಯೋದಿಕ್ಕೆ ಯಾರಾದರೂ ಪುಣ್ಯ ಮಾಡಿರಬೇಕು. ರೂಪಕ್ಕೆ ತಕ್ಕ ಗುಣ—ಅವಳ ನಡತೇಗೆ ಎಂಥವರಾದರೂ ನಮಸ್ಕಾರ ಹಾಕಬೇಕು."

"ನಮ್ಮ ಮಗು ನಮಗೆ ಹೆಚ್ಚು. ಇತರರಿಗೆ ಹೇಗೆ ಹೆಚ್ಚಾಗಬೇಕು. ಪಾತಕ್ಕಾ."

"ನೀವು ಸುಮ್ಮನೆ ಯೋಚನೆ ಮಾಡಬೇಡಿ, ರಂಗಮ್ಮ. ಗೌರೀಗೆ ಪರಮೇಶ್ವರನಂಥ ಗಂಡನೇ ಸಿಕ್ಕುತ್ತಾನೆ. ತಡವಾಗಿರುವುದು ಒಳ್ಳೆಯದಕ್ಕೆ.

ಮೈಸೂರಿನವರು ಬಂದು ನೋಡಿಕೊಂಡು ಹೋದರಲ್ಲಾ ಅವರೇನು ಹೇಳಿದರು."

"ಇಲ್ಲಿ ಅಂಥ ಚೆನ್ನಾಗಿ ಒಪ್ಪಿ ಹೋಗಿದ್ದರಲ್ಲಾ, ಊರಿಗೆ ಹೋಗಿ ೫೦೦೦ ರೂಪಾಯಿ ವರದಕ್ಷಿಣೆ ಕೊಟ್ಟರೆ ಮದುವೆಯಾಗಬಹುದು ಎಂದು ಬರೆದಿದ್ದಾರೆ. ನಾವು ಎಲ್ಲಿಂದ ತರೋಣ ಅಷ್ಟೊಂದು ಹಣ, ಪಾತಕ್ಕ."

"ವರ ಓದ್ದೋನು—ಬುದ್ಧಿವಂತ ಎಂತ ಹೇಳಿದ್ದಿರಿ."

"ಹೌದಮ್ಮ—ಆದರೆ ಧನ ಪಿಶಾಚಕ್ಕೆ ಯಾರು ಹೊಣೆ."

"ಇವರ ವಿದ್ಯೆಯೆಲ್ಲಾ ಅಂಗಡಿ ದಿನಸಾಯಿತು, ರಂಗಮ್ಮ."

"ಯಾರನ್ನ ಯಾಕೆ ಆಕ್ಷೇಪಿಸೋಣ ಪಾತಕ್ಕ. ಹೆಣ್ಣು ಜನ್ಮ ಕೆಟ್ಟದ್ದು. ನನ್ನ ಹೊಟ್ಟೆ ಪುಣ್ಯ ಎಷ್ಟಂತ ಹೇಳಿಕೊಳ್ಳಲಿ ಪಾತಕ್ಕ. ಸೀತೂ ಪಾಡು ಹಾಗಾಯಿತು—ಈಗ ಗೌರಿ ಪಾಡು ಏನಾಗುತ್ತೋ ?"

"ಆಸ್ಪತ್ರೆಗೆ ಈಚೆಗೆ ಹೋಗಿದ್ದಿರಾ ರಂಗಮ್ಮ."

ರಂಗಮ್ಮನವರ ಕೈ ನಿಂತುಹೋಯಿತು. ಬಿಕ್ಕಿ ಬಿಕ್ಕಿ ಅಳತೊಡಗಿದರು. ಆ ಅಳಲಿಗೆ ಸಮಾಧಾನವೇ ಇರಲಿಲ್ಲ. ಹಡೆಮೊಡಲು ಬೆಂದೊಡಲಾಗಿತ್ತು. ಅವರ ಭೀಕರ ಜ್ವಾಲೆ ಅವರ ದೇಹವನ್ನು ಕ್ರಮ ಕ್ರಮೇಣ ಸುಡುತ್ತಿತ್ತು.

"ಸಮಾಧಾನ ತಂದ್ಕೊಳ್ಳಿ ರಂಗಮ್ಮ. ನೀವೇ ಹೀಗೆ ಧೈರ್ಯಗೆಟ್ಟರೆ ಏನು ಗತಿ ?"

"ನಾವು ಮಾಡಿದ ಅಪರಾಧವೇನು ಪಾತಕ್ಕ. ಆಸ್ಪತ್ರೆಗೆ ಹೋಗಿ ಮಗಳನ್ನು ನಾವು ನೋಡಿಬರುವುದೂ ತಪ್ಪೆ ?"

"ಹಾಗೆ ಹೇಳಿದ್ದಾರೇನು ?"

"ಹೇಳಿದ್ದಾರಮ್ಮಾ. ಅವರು ಬಾಗಿಲಲ್ಲೇ ನಿಂತು ದಾದಿಯ ಹತ್ತಿರ ಸೀತೂ ಯೋಗಕ್ಷೇಮ ತಿಳಿದುಕೊಂಡು ಬರುತ್ತಾರೆ."

"ನಿಮ್ಮ ಬೀಗರಿಗೆ ಬುದ್ಧಿಯಿಲ್ಲಾಂದ್ರೆ ಅಳಿಯಂದಿರಿಗೆ ವಿವೇಕ ವಿಲ್ಲವೇ ? ಅವರೇನು ಎಳೆಗೂಸೇ."

"ತಂದೆ ಮಕ್ಕಳು ಎಲ್ಲಾ ಒಂದೇ ಜಾತಿ ಪಾತಕ್ಕ. ಸೀತೂನ ಗಿಣಿ ಹಾಗೆ ಸಾಕಿ ಹದ್ದಿನ ಬಾಯಿಗೆ ಹಾಕಿದೆವು."

"ಅವರದ್ದು ಏನಂತೆ ಸಂಕಟ."

"ನಾವು ಬುಟ್ಟಿ ಬುಟ್ಟಿ ಸವರ್ರ ಕಳಿಸಬೇಕಾಗಿತ್ತು. ನಮ್ಮ ಅಳಿಯ ದೇವರು ವಿಲಾಯಿತೀಗೆ ಓದೋಕೆ ಹೋಗ್ತೀನಿ, ದುಡ್ಡು ಕೊಡಿ ಎಂತ ಕೇಳಿದರು. ದುಡ್ಡು ಎಲ್ಲಿಂದ ತರೋಣ ಎಂತ ಇವರು ಹೇಳಿದರು. ಸರಿ. ಆ ಕೋಪ ಯಾರ ಮೇಲೆ ತೀರಿಸಬೇಕಮ್ಮ—ಆ ಬಡಪಾಯಿ ಸೀತೇ ಮೇಲೆ. ಅವಳು ಇಲ್ಲಿಗೆ ಬರದ ಹಾಗೆ ಅಡ್ಡಿ ಮಾಡಿದರು. ಹೋಗಲಿ, ಎಂದು ಹೆಣ್ಣು ಒಪ್ಪಿಸಿಕೊಟ್ಟೆವೋ ಆಗ ಅದು ಅವರ ವಸ್ತುವಾಯಿತು, ಎಲ್ಲಿಯಾದರೂ ಸುಖವಾಗಿರಲಿ ಎಂದು ನಾವು ಸುಮ್ಮನಾದೆವು. ಆದರೆ ಆಜ್ಞೆ ಅಲ್ಲೀಗೇ ನಿಲ್ಲಲಿಲ್ಲ ಪಾತಕ್ಕ. ನಾವು ಯಾರೂ ಅಲ್ಲಿಗೆ ಸೀತೂನ ನೋಡಿಕೊಂಡು ಬರೋದಿಕ್ಕೂ ಹೋಗದಂತಾಯಿತು. ಕಳೆದ ಗೌರಿಹಬ್ಬ ದಲ್ಲಿ ಅಳಿಯನಿಗೆ ಒಂದು ಜೊತೆ ಪಂಚೆ ತೆಗೆದುಕೊಂಡು ಮಗಳಿಗೆ ಮಂಗಳ ದ್ರವ್ಯ ತೆಗೆದುಕೊಂಡು ಇವರು ಹೋಗಿದ್ದರು. ಅಳಿಯ, ಅವರಪ್ಪ ಇಬ್ಬರೂ ಇವರನ್ನ ಹೀನಾಮಾನ ಬೈದು ಕಳಿಸಿದರು. ಪಂಚೇನ ಇವರ ಮುಖದ ಮೇಲೆ ಹಾಕಿದರು. ಹೋಗಲಿ. ಈಗ ಸೀತೇನ ಆಸ್ಪತ್ರೆಗೆ ಹಾಕಿದ್ದಾರೆ. ಅವಳಿಗೆ ನಿತ್ಯ ಜ್ವರ ಬರುತ್ತಾ ಇದೆಯಂತೆ. ಬಾಣಂತಿ ಕ್ಷಯಕ್ಕೆ ತಿರುಗಿ ಕೊಂಡರೆ ಏನಮ್ಮಾ ಗತಿ?"

"ರಂಗಮ್ಮ—ನೀವು ಯಾರಿಗೂ ಅನ್ಯಾಯಮಾಡಿಲ್ಲ ಹಿಂದಿನ ಜನ್ಮ ದಲ್ಲಿ ಚೆನ್ನಾಗಿ ಗೌರಿಪೂಜೆ ಮಾಡಿ ದೇವರಂಥ ಗಂಡನ್ನ ಪಡೆದುಕೊಂಡಿ ದ್ದೀರಿ. ದೇವರು ಎಲ್ಲಾ ಸರಿ ಮಾಡುತ್ತಾನೆ—ಅಧೈರ್ಯಪಟ್ಟುಕೊಳ್ಳ ಬೇಡಿ."

"ನಾನೇನೂ ಬಯಸಲ್ಲ ಪಾತಕ್ಕ. ಇರೋದು ಎರಡು ಹೆಣ್ಣು ಮಕ್ಕಳು. ಅವು ಸರಿಯಾದ ಕಡೆ ಸೇರಿ ಸಂತೋಷವಾಗಿ ಬಾಳ್ವೆಮಾಡಿ ಕೊಂಡಿದ್ದರೆ ಸಾಕು. ನನಗೆ ಒಡವೆ ಬೇಡ—ವಸ್ತ್ರ ಬೇಡ ಏನೂ ಬೇಡ. ಅವರೊಬ್ಬರು ತುಂಬ ಆಯಸ್ಸು ಹೊತ್ತು ಚೆನ್ನಾಗಿದ್ದರೆ ಅದೇ ನನ್ನೆಲ್ಲ ಭಾಗ್ಯ."

ಪಾತಕ್ಕನ ಕಣ್ಣಿನಲ್ಲಿ ನೀರಿಳಿಯಿತು. ಸಮಾಧಾನದ ಮಾತುಗಳ ನ್ನಾಡುವುದಕ್ಕೆ ಮಾತುಗಳು ಉಳಿಯಲಿಲ್ಲ. ಮಣೆ, ಲಟ್ಟಣೆ ತೆಗೆದಿಟು

" ನಾನು ಬರುತ್ತೇನೆ ರಂಗವ್ಮಾ. ನಾಳೆ ಸಂಜೆ ಕುಳಿತು ಹಪ್ಪಳದ ಕೆಲಸ ಮುಗಿಸಿಬಿಡೋಣ."

ಎಂದು ಹೇಳಿ ಹೊರಟುಬಿಟ್ಟರು.

ಕೈಯಲ್ಲೊಂದು ತರಕಾರಿಚೀಲ, ಕಾಗದದ ಸುರುಳಿ ಹಿಡಿದು ಸುಬ್ಬರಾಯರು ಮನೆ ತಲಪಿದರು. ಅಂಗಿ ರುಮಾಲು ತೆಗೆದು ಆರಾಮಾಸನದ ಮೇಲೆ ಹಾಗೆ ಮಲಗಿಕೊಂಡರು. ರಂಗಮ್ಮ ಬಂದು ತರಕಾರಿ ಚೀಲವನ್ನು ಒಳಗೊಯ್ದು ಇಟ್ಟು ಬಂದರು.

" ಕಾಗದ ಸುರುಳಿಯಲ್ಲೇನಿದೆ ?"

" ತೆಗೆದು ನೋಡು."

ರಂಗಮ್ಮ ಸುರುಳಿ ಬಿಚ್ಚಿನೋಡಿದರು. ಹನ್ನೆರಡು ಮೊಳದ ಒಂದು ಧರ್ಮಾವರದ ಸೀರೆ, ಕಣ.

" ಎಷ್ಟೊಂದ್ರೆ ಇದು."

" ಸೀರೆಗೆ ಅರವತ್ತು, ಕಣ ಐದು ರೂಪಾಯಿ."

" ದುಡ್ಡಿತ್ತೇ ?"

" ಸಾಲ ಸಿಕ್ಕೋತನಕ ದುಡ್ಡಿಗೇನು ಕೊರತೆ ಹೇಳು ?—ಗೌರಿ ಎಲ್ಲಿ ?"

" ಎದುರುಮನೆಗೆ ಅರಶಿನಕುಂಕುಮಕ್ಕೆ ಹೋಗಿದ್ದಾಳೆ."

" ನೋಡು. ನಾಳೆ ಮಧ್ಯಾನ್ಹ ಗೌರೀನ ನೋಡೋದಿಕ್ಕೆ ಬರುತ್ತಾರೆ. ಅವಳನ್ನು ನಾಳೆ ಸ್ಕೂಲಿಗೆ ಕಳಿಸಬೇಡ."

" ಯಾರು ?"

" ವೆಂಕಟಾಚಲಯ್ಯನ ಮನೆಯವರು."

" ಹೇಗೆ ಪರವಾಯಿಲ್ಲವೋ ?"

" ಭೂಮಿಕಾಣಿ ಇದೆಯಂತೆ. ಹುಡುಗ ಬಿ.ಎ. ಕಟ್ಟುತ್ತಾನೆ. ಇಬ್ಬರೇ ಗಂಡುಮಕ್ಕಳು. ಜನ ಅನುಕೂಲಸ್ಥರು."

" ಜನ ಹೇಗಂತೆ ?"

"ಅದು ಯಾರು ಹೇಳುವುದಕ್ಕಾಗುತ್ತೆ. ಸ್ವಂತ ಅನುಭವಕ್ಕೆ ಬಂದ ಮೇಲೆ ತಿಳಿಯುವ ವಿಷಯ ಅದು."

"ಸ್ವಲ್ಪ ಯಾರನ್ನಾದರೂ ವಿಚಾರಿಸೀಂದ್ರೆ."

"ವಿಚಾರಿಸದೆ ಇರುತ್ತೀನೆಯೇ? ಹಿರಿ ಬೀಗರದ್ದು ಎಲ್ಲಾ ವಿಚಾರಿಸಿ ತಾನೆ ಕಟ್ಟಿಕೊಂಡದ್ದು."

"ಆಸ್ಪತ್ರೆ ಕಡೆ ಹೋಗಿದ್ದಿರಾ?"

"ಹೋಗಿದ್ದೆ. ಜ್ವರ ಇಳಿದಿದೆಯಂತೆ. ತುಂಬ ನಿಶ್ಶಕ್ತಿ.'

"ಸೀತೂನ ಎಂದು ನೋಡೋದು."

ಎಂದು ಕೇಳುತ್ತಾ ರಂಗಮ್ಮ ಕಣ್ಣೀರ್ಗರೆಯತೊಡಗಿದರು. ಸುಬ್ಬ ರಾಯರ ಕಂಠ ಗದ್ಗದಿತವಾಯಿತು.

"ನಾವು ನೋಡದಿದ್ದರೆ ಏನಂತೆ. ಬಿಡು. ಅವಳ ಮಾವ, ಗಂಡ ಬೇಕಾದ ಆರೈಕೆ ಮಾಡುತ್ತಾ ಇದ್ದಾರೆ. ಅವರ ವಸ್ತು ಜೋಪಾನಮಾಡು ವುದನ್ನು ನಾವು ಅವರಿಗೆ ಹೇಳಿಕೊಡಬೇಕೇ?"

"ಅವರೂ ಹೆಣ್ಣು ಹೆತ್ತಿಲ್ಲವೇ? ಹೆಣ್ಣು ಕರುಳಿನ ಸಂಕಟ ಅವರಿಗೆ ತಿಳಿಯಲ್ಲವೇ?"

"ಕೊಟ್ಟಹೆಣ್ಣು ಕುಲಕ್ಕೆ ಹೊರಗು ಅಂದುಕೊಂಡು ಮನಸ್ಸು ಕಲ್ಲು ಮಾಡಿಕೋ."

"ಅವರ ಚಾಳೀನೇ ಇವರೂ ಆರಂಭಿಸಿದರೆ ಏನುಗತಿ?"

"ಪ್ರಪಂಚದಲ್ಲಿ ಒಳ್ಳೆಯವರೂ ಇರುತ್ತಾರೆ ರಂಗೂ—ಎಲ್ಲರೂ ಒಂದೇ ರೀತಿ ಇದ್ದರೆ ಲೋಕ ಸಾಗುವುದು ಹೇಗೆ?"

"ಗೌರಿಗಾದರೂ ಒಳ್ಳೆ ಮನೆ ನೋಡಿ ಅಂದ್ರೆ."

"ನಾನು ಮಾಡಿರೋ ಪ್ರಯತ್ನ ಸಾಲದು ಅನ್ನುತ್ತೀಯಾ?"

"ಆ ಮಾತಾಡುವುದಕ್ಕೆ ನನಗೆ ಬಾಯಿ ಹೇಗೆಬರುತ್ತೆ."

"ಗೌರಿ ನನ್ನ ಕಣ್ಣಿನ ಬೊಂಬೆ. ಅದರ ಹಣೆಯಲ್ಲಿ ಏನು ಬರೆ ಡದೆಯೋ?"

"ಹುಡುಗ ಹೇಗಿದ್ದಾನೆ."

"ಲಕ್ಷಣವಾಗಿದ್ದಾನೆ. ವರಸಾಮ್ಯ ಬಹಳ ಚೆನ್ನಾಗುತ್ತೆ."

"ಇವರು ಎಷ್ಟು ಸಾವಿರ ಬೇಕೆನ್ನುತ್ತಾರೆ."

"ಅದು ನಾಳೆ ಗೊತ್ತಾಗಬೇಕು."

"ಒಂದುವೇಳೆ ವರದಕ್ಷಿಣೆ ಕೇಳಿದರೆ ಏನುಮಾಡುವುದು ?"

"ಸಂಬಂಧ ಚೆನ್ನಾಗಿದ್ದರೆ ಏನು ಮಾಡುವುದು. ಇರೋ ಒಂದು ಗದ್ದೆ ಮಾರಿ ಕೊಡೋದು. ಗೌರೀಗಿಂತ ಗದ್ದೆ ದೊಡ್ಡದೇ ?"

"ಮಾವನವರು ಅದಕ್ಕೆ ತಮ್ಮ ದೇಹಾನೇ ಸವೆದರಲ್ಲಾ."

"ಹೌದು. ಸೀತೂ ಮದುವೆಗಾದ ಖರ್ಚು ಅದರ ಮೇಲೆ ಅಳಿಯ ದೇವರ ತೃಪ್ತ್ಯರ್ಥವಾಗಿ ಮಾಡಿದ ಖರ್ಚು—ಇವುಗಳ ಸಾಲ ಇನ್ನೂ ತೀರಿಲ್ಲ. ಹಣ ಬೇರೆ ಎಲ್ಲಿಂದ ತರಲಿ."

"ವರದಕ್ಷಿಣೆ ಕೇಳದೇ ಇರೋ ಬೀಗರು ಯಾರೂ ಸಿಕ್ಕುವುದಿಲ್ಲವೇ?"

"ನಮ್ಮ ಭಾಗಕ್ಕೆ ಇಲ್ಲಾಂತ ಕಾಣತ್ತೆ—ಮಗು ಎಷ್ಟು ಹೊತ್ತು ಹೋಯ್ತು ನೋಡು."

ರಂಗಮ್ಮ ಬಾಗಿಲಲ್ಲಿ ನಿಂತು 'ಗೌರಿ' ಎಂದು ಕೂಗಿದರು. ಓಗೊಟ್ಟ ಗೌರಿ ಕೈಯಲ್ಲಿ ಎಲೆಯಡಿಕೆ ಕೋಸುಂಬರಿ ಹಿಡಿದು ಬಂದಳು.

"ಅವರ ಮನೆಯಲ್ಲಿ ಏನೇ ಅಮ್ಮಾ."

"ಶುಕ್ರವಾರದ ಪೂಜೆ ಅಣ್ಣಾ.."

"ನೀನೂ ಹಾಡು ಹೇಳಿದೆಯೋ ಇಲ್ಲವೋ ?"

"ಹೇಳದೆ ಇದ್ದರೆ ಬಿಡುತ್ತಾರೆಯೇ ?"

"ಅವೇನು ಕೈಲಿ."

"ಕೋಸುಂಬರಿ—ಸ್ವಲ್ಪ ಬಾಯಿ ಆ ಅನ್ನು ಅಣ್ಣಾ."

"ಯಾಕೆ ?"

"ಅದಕ್ಕೆ ನಾನು ಕೋಸುಂಬರಿ ಹಾಕಬೇಕು."

"ನನಗೆ ಬೇಡಮ್ಮ....ನೀನೇ ತಿಂದು ಬಿಡು."

"ಹೋಗಣ್ಣಾ—ನಾನು ಏನು ಕೊಡುವುದಕ್ಕೆ ಬಂದರೂ ನೀನು ಹೀಗೆ ಮಾಡುತ್ತೀ."

"ಇಲ್ಲಮ್ಮ—ಕೋಪಮಾಡಿಕೊಳ್ಳಬೇಡ. ಕೊಡು."

ತಂದೆ ಮಗಳು ಕೋಸುಂಬರಿ ತಿಂದು ಮುಗಿಸಿದರು.

"ಗೌರಿ—ಆ ಕಾಗದದ ಸುರುಳಿ ಒಳಗೆ ಏನಿದೆ ನೋಡು."

ಗೌರಿ ಸುರುಳಿ ಬಿಚ್ಚಿನೋಡಿದಳು. ಕೇಸರಿಬಣ್ಣದ ರೇಷ್ಮೆ ಸೀರೆ.

"ಇದು ಯಾರಿಗಣ್ಣಾ."

"ನಿನಗೇ."

"ಎಷ್ಟು ಚೆನ್ನಾಗಿದೆ."

"ನಾಳೆ ಉಟ್ಟುಕೊಳ್ಳಮ್ಮ."

"ನಾಳೆ ಏಕೆ ಇವತ್ತೇ ಉಟ್ಟುಕೊಳ್ಳುತ್ತೇನೆ."

"ನಾಳೆ ನಿನ್ನ ಯಜಮಾನರಾಗೋರು ಬರುತ್ತಾರೆ."

ಗೌರಿ ನಾಚಿದಳು. ಅವಳ ಮುಗ್ಧವದನ ಗಂಭೀರವಾಯಿತು.

"ನನ್ನ ಕಂಡು ಬೇಜಾರಾಗಿದೆಯೇ ಅಣ್ಣಾ."

"ಯಾಕೆ ತಾಯಿ."

"ಬೇಗ ಸೀರೆ ಉಡಿಸಿ ಆಚೆ ಕಳಿಸಿಬಿಡಬೇಕೂಂತ ಇದ್ದೀರಲ್ಲಾ."

ರಾಯರು ಉಗುಳು ನುಂಗಿಕೊಂಡರು. ತಡೆತಡೆದು.

"ತೌರುಮನೆಯಲ್ಲಿ ಎಷ್ಟು ದಿವಸ ಇರುವುದಕ್ಕಾಗುತ್ತಮ್ಮ. ಗಂಡನ ಮನೆಗೆ ಹೋಗಬೇಕು. ಹೆಣ್ಣಿಗೆ ಗಂಡನೇ ಸರ್ವಸ್ವ.—ನಮ್ಮ ಮನೆಯಲ್ಲಿ ಬೆಳಸಿದ ಬೆಳಕನ್ನು ಬೇರೆ ಮನೆಗೆ ಬೆಳಗಲು ನಾವೇ ನೀಡುತ್ತೇವೆ."

"ನಿನ್ನ, ಅಮ್ಮನ್ನ ಬಿಟ್ಟು ಹೋಗೋದಿಕ್ಕೆ ನನಗೆ ಹೆದರಿಕೆ ಆಗತ್ತಲ್ಲಾ."

"ನಿನಗೆ ಹೆದರಿಕೆಯಾಗದ ಹಾಗೆ, ಮನಸ್ಸು ನೋಯದ ಹಾಗೆ ನಿನ್ನ ಗಂಡ ನೋಡಿಕೊಳ್ಳುತ್ತಾನಮ್ಮಾ. ನೀನು ಹೋಗುವುದಾದರೂ ಇನ್ನೂ ೨–೩ ವರ್ಷಗಳ ಮೇಲೆ. ಮದುವೆಯಾದ ಕೂಡಲೆ ನಿನ್ನ ಕಳುಹಿಸಿಬಿಡುತ್ತಾರೆ ಎಂದು ತಿಳಿದುಕೊಂಡೆಯಾ?"

"ಎದುರು ಮನೆ ಸರೋಜನ್ನ ಮದುವೆಯಾದ ಕೂಡಲೆ ಕಳುಹಿಸಿಬಿಟ್ಟರಲ್ಲಾ."

"ಒಬ್ಬೊಬ್ಬರ ಮನೆಯಲ್ಲಿ ಹಾಗಾಗುತ್ತೆ."

"ನಮ್ಮ ಮನೆಯಲ್ಲಿ ಹಾಗಾಗಲ್ಲವೇ?"

"ಆಗಲ್ಲ ತಾಯಿ."

"ಅಣ್ಣಾ!"

"ಏನಮ್ಮಾ."

"ಅಮ್ಮ ಯಾವಾಗಲೂ ಅಳ್ತಾ ಇರ್ತಾಳಣ್ಣಾ. ನೀನು ಕಛೇರಿಗೆ ಹೋದ ಮೇಲೆ ಅಳೋದೇ ಅವಳ ಕೆಲಸ. ಅವಳು ಅಳುವುದನ್ನು ಕಂಡರೆ ನನಗೂ ಅಳು ಬರುತ್ತೆ."

"ಅವಳ ಸಂಕಟ ನೀನು ಕಾಣೆ ಕಂದಾ."

"ಇನ್ನು ಮೇಲೆ ಅಳಬೇಡ ಎಂದು ಹೇಳಣ್ಣಾ."

"ಹಾಗೇ ಆಗಲಮ್ಮ. ನೋಡು ಅಡಿಗೆಯಾಗಿದ್ದರೆ ತಟ್ಟೆಹಾಕು. ಊಟಮಾಡೋಣ. ಎಲ್ಲಾರೂ ಬೇಗ ಊಟ ಮುಗಿಸಿ ಇವತ್ತು ಸಿನೀಮಾಗೆ ಹೋಗೋಣ."

"ಅಮ್ಮ."

"ಅವಳನ್ನು ಕರೆದುಕೊಂಡು ಬರೋದು ನಿನ್ನ ಭಾರ."

"ಅಮ್ಮ ಬರದಿದ್ದರೆ ನಾನು ಬರೋದೇ ಇಲ್ಲ."

"ನಾನೂ ಹೋಗೋದಿಲ್ಲ."

"ಅಮ್ಮಾ........" ಎಂದು ಕೂಗಿಕೊಂಡು ಗೌರಿ ಅಡಿಗೆಯ ಮನೆ ಕಡೆ ಧಾವಿಸಿದಳು.

೩

ವೆಂಕಟಾಚಲಯ್ಯ ಕೆಲಸಕ್ಕೆ ಸೇರಿದಾಗ ಅವರ ವಯಸ್ಸು ೧೮. ಹಳ್ಳಿಯ ಶಾಲಾ ಮಾಸ್ತರಾಗಿದ್ದವರು ತಮ್ಮ ಯೋಗ್ಯತೆಯ ಪ್ರಭಾವದಿಂದ ಹೈಸ್ಕೂಲ್ ಹೆಡ್‌ಕ್ಲಾರ್ಕ್ ಪದವಿವರೆಗೇರಿದರು. ಹೆಸರಿಗೆ ಹೆಡ್‌ಕ್ಲಾರ್ಕ್. ಸಂಬಳ ೪೫ ಆದರೂ ಅವರು ಹೆಡ್‌ಮಾಸ್ತರಿಗಿಂತಲೂ ಮಿಗಿಲಾದ ಅಧಿಕಾರ, ದರ್ಪ ನಡೆಸಿ ಹೆಡ್‌ಕ್ಲಾರ್ಕ್ ಸಂಬಳ ತೆಗೆದುಕೊಂಡು ಪ್ರಿನ್ಸಿಪಾಲ್ ಪದವಿಯನ್ನು ನಿರ್ವಹಿಸಿದರೆಂದರೂ ತಪ್ಪಾಗದು. ಫ್ರೀ, ಹಾಫ್ ಫ್ರೀ, ಸ್ಕಾಲರ್‌ಷಿಪ್ ವಿದ್ಯಾರ್ಥಿಗಳಿಗಂತೂ ವೆಂಕಟಾಚಲಯ್ಯನವರ ನೆನಪು ಜನ್ಮಜನ್ಮಾಂತರಕ್ಕೂ ಅಳಿಸಿ ಹೋಗುವಹಾಗಿರಲಿಲ್ಲ. ಸ್ಕಾಲರ್‌ಷಿಪ್ ವಿದ್ಯಾರ್ಥಿಗಳು ಒಂದು ತಿಂಗಳೂ ತಮ್ಮ ಪೂರ್ಣಗ್ರಾಸವನ್ನು ಕಂಡುದಿಲ್ಲ.

ಕಡಿಮೆ ಹಣ ಕೊಟ್ಟರೆಂದು ವೆಂಕಟಾಚಲಯ್ಯನವರನ್ನು ಆಕ್ಷೇಪಿಸುವ ಎದೆಗಾರಿಕೆ ಯಾವ ವಿದ್ಯಾರ್ಥಿಯೂ ತೋರುತ್ತಿರಲಿಲ್ಲ.

ವೆಂಕಟಾಚಲಯ್ಯನವರ ದರ್ಪಕ್ಕೆ ಫಣಿಯಮ್ಮನೂ ತಕ್ಕಮಟ್ಟಿಗೆ ಕಾರಣಳಾಗಿದ್ದಳು. ಶಾಲೆಗೆ ವೆಂಕಟಾಚಲಯ್ಯ ಯಜಮಾನರಾಗಿದ್ದರೆ ಅವರಿಗೆ ಫಣಿಯಮ್ಮ ಯಜಮಾನಳಾಗಿದ್ದಳು. ಆಕೆಯ ನಾಗನಾಲಿಗೆಗೆ ವೆಂಕಟಾಚಲಯ್ಯ ಗಡಗಡ ನಡುಗುತ್ತಿದ್ದರು. ಮನೆಯಲ್ಲಿ ವೆಂಕಟಾಚಲಯ್ಯನ ದರ್ಪ ಏನೇನೂ ನಡೆಯುತ್ತಿರಲಿಲ್ಲ. ಫಣಿಯಮ್ಮನ ಮಾತು ವೇದವಾಕ್ಯ.

ಮನೆಯ ಯಜಮಾನನೇ ಇಂಗುತಿಂದ ಕಪಿಯಾದ ಮೇಲೆ ಇನ್ನು ಮಕ್ಕಳ ಪಾಡೇನು? ಹಿರಿಯ ಮಗ ನರಸಿಂಹಮೂರ್ತಿ ಸಿಟಿ ಬ್ಯಾಂಕಿನಲ್ಲಿ ಗುಮಾಸ್ತ. ತಿಂಗಳಾಗುತ್ತಲು ಸಂಬಳ ತೆಗೆದುಕೊಂಡು ತಾಯಿ ಕೈಯಲ್ಲಿ ಹಾಕುವುದೊಂದು ಬಿಟ್ಟು ಅವನಿಗೇನೂ ಗೊತ್ತಿರಲಿಲ್ಲ. ಹೆಂಡತಿಯನ್ನು ಮಾತನಾಡಿಸಬೇಕಾದರೂ ತಾಯಿಯ ಅಪ್ಪಣೆ ಪಡೆದುಕೊಳ್ಳಬೇಕಾಗುತ್ತಿತ್ತು. ಕಿರಿಯಮಗ ಶ್ರೀನಿವಾಸನಿಗೆ ಸ್ವಲ್ಪ ಸ್ವಾತಂತ್ರ್ಯ. ಅವನು ಬಿ.ಎ ಪ್ಯಾಸು ಮಾಡಿಬಿಟ್ಟರೆ ತಮಗೊಂದು ಕೋಡು ಬರುತ್ತದೆಂದು ಫಣಿಯಮ್ಮ ಗ್ರಹಿಸಿದ್ದರು.

ಫಣಿಯಮ್ಮ ಶ್ರೀನಿವಾಸನ ಮೇಲೆ ಹೆಚ್ಚಿನ ಆಸೆಯನ್ನಿಟ್ಟುಕೊಂಡಿದ್ದುದಕ್ಕೆ ಇನ್ನೂ ಒಂದು ಕಾರಣವಿತ್ತು. ಹನ್ನೆರಡು ರೂಪಾಯಿ ಪರೀಕ್ಷೆ ನಾಪಾಸಾದ ನರಸಿಂಹಮೂರ್ತಿಗೆ ಎರಡು ಸಾವಿರ ರೂಪಾಯಿ 'ವರದಕ್ಷಿಣೆ' ವಸೂಲ್ಮಾಡಿದ ಫಣಿಯಮ್ಮ ಶ್ರೀನಿವಾಸನ ಮಾವನಿಂದ ಐದು ಸಾವಿರವಾದರೂ ದಕ್ಕಬಹುದೆಂದು ದೃಢವಾಗಿ ನಂಬಿದ್ದರು.

ಸುಬ್ಬರಾಯರ ಸ್ಥಿತಿಗತಿ ಕೇಳಿದ ಮೇಲೆ ಒಂದೇ ಕ್ಷಣವಲ್ಲಿ ಫಣಿಯಮ್ಮ ಮಾತು ಮುಗಿಸಿಬಿಟ್ಟರು.

"ಎಂಥದು ಈ ಭಿಕಾರಿ ಸಂಬಂಧ"

ಆದರೆ ಈ ಸಂಬಂಧ ಕೂಡಿಸುವುದಕ್ಕೆ ಮಧ್ಯೆ ಓಡಿಯಾಡಿದ ಶಾನುಭೋಗ ಗಿರಿಯಪ್ಪನವರು ಶ್ರೀನಿವಾಸನ ಕಿವಿ ಚೆನ್ನಾಗಿ ಹಿಂಡಿದ್ದರು. ತ್ಯಾಮಗೊಂಡ್ಲು ಬಳಿಯಿದ್ದ ವೆಂಕಟಾಚಲಯ್ಯನ ಹೊಲ ಗದ್ದೆಗಳನ್ನು

ಗಿರಿಯಪ್ಪನೇ ನೋಡಿಕೊಳ್ಳುತ್ತಿದ್ದರು. ಅವರ ಮಾತನ್ನು ತೆಗೆದುಹಾಕು ವುದು ಫಣಿಯಮ್ಮನಿಗೂ ಸ್ವಲ್ಪ ಕಷ್ಟದ ಕೆಲಸವಾಗಿತ್ತು. ಗಿರಿಯಪ್ಪ ಸುಬ್ಬರಾಯರಿಗೆ ದೂರದ ಸಂಬಂಧವಾಗಿದ್ದ ಸಂಗತಿ ಮಾತ್ರ ಗೋಪ್ಯ ವಾಗಿತ್ತು.

ಕೋರ್ಟು ಕೆಲಸದ ಸಲುವಾಗಿ ಒಮ್ಮೆ ಬೆಂಗಳೂರಿಗೆ ಬಂದ ಗಿರಿಯಪ್ಪ ಕೆಲಸ ಮುಗಿಸಿಕೊಂಡು ನೇರವಾಗಿ ಕಾಲೇಜ್ ಬಳಿ ಹೋಗಿ ಶ್ರೀನಿವಾಸನನ್ನು ಹಿಡಿದರು. ಶ್ರೀನಿವಾಸ ಶಾನುಭೋಗರನ್ನು 'ಯೂನಿ ಯನ್ ರೆಸ್ಟುರಾ'ಗೆ ಕರೆದೊಯ್ದು ಪಟ್ಟಾಗಿ ಎರಡು ಮಸಾಲೆ ದೋಸೆ ಹೊಡೆಸಿದ. ಗಿರಿಯಪ್ಪ ಅವನ ಆತಿಥ್ಯಕ್ಕೆ ತೃಪ್ತಿಪಟ್ಟುಕೊಂಡ.

"ಸೀನೂ ಒಂದು ವಿಷಯ ನಿನ್ನ ಹತ್ತಿರ ಪ್ರಸ್ತಾಪಿಸಿ ಆನಂತರ ನಿಮ್ಮಪ್ಪ ಅಮ್ಮನಿಗೆ ಹೇಳಬೇಕೂಂತಿದ್ದೀನಪ್ಪಾ" ಎಂದು ಆರಂಭಿಸಿದರು.

"ಹೇಳಿ ಮಾವಯ್ಯಾ ನನ್ನ ಹತ್ತಿರ ಏಕೆ ನಿಮಗೆ ಸಂಕೋಚ."

ಗಿರಿಯಪ್ಪನವರನ್ನು ನರಸಿಂಹಮೂರ್ತಿ ಶ್ರೀನಿವಾಸ 'ಮಾವಯ್ಯ' ಎಂದು ವಿಶ್ವಾಸಕ್ಕೆ ಸಂಬೋಧಿಸುತ್ತಿದ್ದರು.

"ನೀವೆಲ್ಲಾ ವಿದ್ಯಾವಂತರು. ನಾನು ಹಳ್ಳಿ ಕಗ್ಗ. ನಿಮ್ಮ ಆಚಾರ ವಿಚಾರ ನನಗೆ ಅರ್ಥವಾಗಲಿಲ್ಲ ಆದರೂ ನಾನು ನಿನ್ನ ಹಿತೈಷಿಯೆಂದು ಒಂದು ಮಾತು ಹೇಳೋ ಧೈರ್ಯ ಮಾಡುತ್ತೇನೆ."

"ಇದೇನು ಮಾವಯ್ಯ, ನಿಮ್ಮ ಮುಂದೆ ಬೆಳೆದ ಹುಡುಗರು ನಾವು. ನಮಗೆ ಇಷ್ಟೊಂದು-ಉಪಚಾರವೇ ?"

"ಉಪಚಾರವಲ್ಲ. ಕಾಲಕ್ಕೆ ತಕ್ಕಹಾಗೆ ನಾವೂ ವರ್ತಿಸಬೇಕು."

"ಪೀಠಿಕೆ ಇರಲಿ. ವಿಷಯ ಹೇಳಿ."

"ಈ ವರ್ಷ ನಿನ್ನ ಮದುವೆ ಮಾಡಬೇಕೂಂತ ನಿನ್ನಪ್ಪ ಅಮ್ಮ ನಿರ್ಧರಿಸಿರೋ ಸಂಗತಿ ನಿನಗೆ ಗೊತ್ತಿದೆಯೋ ಇಲ್ಲವೋ ?"

"ಗೊತ್ತಿದೆ."

"ನಾನು ಒಂದು ಕಡೆ ನಿನಗೆ ಐನಾತಿ ಹೆಣ್ಣು ನೋಡಿದ್ದೀನಿ,"

"ಯಾರು ನೋಡಿದರೇನು ಮಾವಯ್ಯ. ಅಮ್ಮ ಒಪ್ಪಿದ ಮೇಲೆ ತಾನೇ ಮಾತು."

"ಅದು ಸರಿ. ಆದರೆ ಯಾವದೋ ಜೋಬದ್ರ ಕಟ್ಟಿದರೆ ನೀನು ಸಂತೋಷವಾಗಿರಬಲ್ಲೆಯಾ?"

"ಹೇಗೆ ಸಾಧ್ಯ?"

"ನಿನಗೆ ಅನುರೂಪಳಾದ ಹೆಣ್ಣು ನಾನು ನೋಡಿದ್ದೀನಿ. ಆ ಸಂಬಂಧ ನಿನಗೆ ಆಗಬಹುದೂಂದ್ರೆ ಮುಂದಿನ ಮಾತು."

"ನಮ್ಮ ಮನೇಲಿ ನಮ್ಮದೆಲ್ಲಾ ಏನು ನಡೆಯುತ್ತೆ ಮಾವಯ್ಯ."

"ಹುಚ್ಚಾ! ನಿನ್ನ ಬಲ ನಿನಗೆ ಗೊತ್ತಿಲ್ಲ ಅನ್ನುವುದು ಅದಕ್ಕೆ."

"ಏನು ನನ್ನ ಬಲ."

"ನಿಮ್ಮಮ್ಮನಿಗೆ ನಿನ್ನ ಕಂಡರೆ ಪಂಚಪ್ರಾಣ. ಅವರು ಯಾರ ಮೇಲೆ ದರ್ಪ ನಡೆಸಿದರೂ ನಿನ್ನ ಮಾತಿಗೆ ಸೋಲುತ್ತಾರೆ. ಹೌದೋ ಅಲ್ಲವೋ?"

"ನೀವು ಹೇಳೋದು ಸ್ವಲ್ಪ ನಿಜ. ಆದರೆ ಅಮ್ಮನ ವಿಷಯ ಹೀಗೇಂತ ಹೇಳೋದಿಕ್ಕೆ ಸಾಧ್ಯವಿಲ್ಲ. ಅವಳು ಯಾವಾಗ ತಿರುಗಿಬೀಳುತ್ತಾಳೋ ಹೇಳುವುದಕ್ಕಾಗುವುದಿಲ್ಲ."

"ಅಲ್ಲೇ ಇರೋದು ನಿನ್ನ ಜಾಣತನ. ಅವರು ತಿರುಗಿಬೀಳದ ಹಾಗೆ ನೀನು ನೋಡಿಕೊಳ್ಳಬೇಕು."

"ನೋಡೋಣ. ಅದು ನನ್ನ ಕೈಯಲ್ಲಿ ಎಷ್ಟು ಸಾಧ್ಯವೋ ಕಾಣೆ. ಯಾವುದು ನೀವು ಹುಡುಕಿರೋ ಸಂಬಂಧ."

"ಇದೇ ಊರಿನವರೇ. ದಿವಾನ್ ಆಫೀಸಿನಲ್ಲಿ ಕೆಲಸದಲ್ಲಿದ್ದಾರೆ. ತುಂಬ ಒಳ್ಳೆಯ ಮನುಷ್ಯ. ಇಬ್ಬರೇ ಹೆಣ್ಣುಮಕ್ಕಳು. ದೊಡ್ಡವಳಿಗೆ ಲಗ್ನವಾಗಿದೆ. ಚಿಕ್ಕವಳನ್ನು ನೀನೊಪ್ಪಿದರೆ........"

"ಹುಡುಗಿ ಹೇಗಿದೆ ಮಾವಯ್ಯಾ."

"ಅದರ ಹೆಸರು ಗೌರಮ್ಮ. ಅದರ ಮೇಲಿಂದಲೇ ತಿಳಿದುಕೋ."

"ನವನೀತಲನಾರಾಯಣನಿಗೆ ಭೀಮಸೇನ ಎಂದು ಹೆಸರಿಟ್ಟ ಹಾಗೋ?"

"ನನ್ನ ಮಾತು ಯಾಕಪ್ಪಾ. ನೀನೇ ಕಣ್ಣಿಂದ ನೋಡು."

"ಅಮ್ಮನ್ನ ಒಪ್ಪಿಸಿದ್ದೀರಾ."

"ಇವತ್ತು ಪ್ರಸ್ತಾಪ ಮಾಡುತ್ತೇನೆ."

"ನಾನು ಮುಂದಕ್ಕೆ ಲಾ ಪರೀಕ್ಷೆಗೆ ಓದಬೇಕೆಂತ ಇದ್ದೀನಲ್ಲಾ."

"ಮಹಾರಾಯನ ಹಾಗೆ ಓದು. ಬೇಡವೆಂದವರಾರು? ಮದುವೆ ಯಾದರೆ ವಿದ್ಯೆಗೆ ಬಹಿಷ್ಕಾರ ಹಾಕಬೇಕೂಂತಲೇ?"

"ಅದಲ್ಲ ಮಾವಯ್ಯಾ—ದುಡ್ಡು."

"ನಿಮಗೇನೋ ದುಡ್ಡಿಗೆ ಬರ."

"ಇದುವರೆಗೆ ಅಣ್ಣನಿಗೆ ಬಂದ ವರದಕ್ಷಿಣೆಯಲ್ಲಿ ನನ್ನ ವಿದ್ಯಾಭ್ಯಾಸ ಸಾಗಿತು. ಮುಂದಕ್ಕೆ ನನಗೇನಾದರೂ ಬಂದರೆ ಅದರಿಂದ ವಿದ್ಯೆ ಮುಂದು ವರಿಸಬೇಕು."

"ಕಂಡವರ ರಕ್ತಹೀರಿ ಇಂಥ ವಿದ್ಯೆ ಕಲಿತರೆಷ್ಟು ಬಿಟ್ಟರೆಷ್ಟು ಸೀನೂ. ನೀನು ತಿಳಿದ ಹುಡುಗ. ಈ ಕಾಲದಲ್ಲಿ ಜನ ಮರ್ಯಾದೆಯಾಗಿ ಜೀವನ ಮಾಡೋದೇ ಕಷ್ಟ. ಇನ್ನು ವರದಕ್ಷಿಣೆ ಎಲ್ಲಿಂದ ತರುತ್ತಾರೆ ಹೇಳು. ಅಲ್ಲದೆ ಸುಬ್ಬರಾಯರು ಸಾಚಾ ಮನುಷ್ಯ. ಲಂಚ ರುಷವತ್ತು ಹೊಡೆದು ದುಡ್ಡು ಮಾಡಿದವರಲ್ಲ. ಏನೋ ತಮ್ಮ ಶಕ್ತ್ಯನುಸಾರ ಮಗಳು ಅಳಿಯನಿಗೆ ಚಿನ್ನ ಬೆಳ್ಳಿ ಕೊಡುತ್ತಾರೆ."

"ಮೊನ್ನೆ ಶಾಲ್ಯದವರು ೧೦,೦೦೦ ಕೊಡ್ತೀವೀಂತ ಬಂದಿದ್ದರು ಮಾವಯ್ಯಾ. ಹೆಣ್ಣು ಚೆನ್ನಾಗಿಲ್ಲಾಂತ ಬೇಡವೆಂದು ಹೇಳಿದ್ದಾಯಿತು."

"ಹೆಣ್ಣು ಕುಂಟೋ ಕುರುಡೋ ಆಗಿದ್ದರೆ ದುಡ್ಡು ಕೊಟ್ಟಾದರೂ ಸಾಗಿ ಹಾಕೋಣ ಎಂತ ಬರುತ್ತಾರೆ. ಗೌರಿ ಹಾಗಿಲ್ಲ ನೋಡು. ತೊಳೆದ ಮುತ್ತಿನ ಹಾಗಿದೆ. ನನಗೆ ಒಬ್ಬ ಗಂಡುಮಗ ಇದ್ದಿದ್ದರೆ ಸುಬ್ಬರಾಯರ ಪಾದಸೇವೆ ಮಾಡಿ ಗೌರಿಯನ್ನು ತಂದುಕೊಳ್ಳುತ್ತಿದ್ದೆ."

"ಏನೂ ಕೊಡದೆ ಅಮ್ಮ ಈ ಸಂಬಂಧ ಒಪ್ಪೋದಿಲ್ಲ ಮಾವಯ್ಯಾ. ನೀವು ಒಪ್ಪಿದರೂ ಅವಳು ಮುರಿಹಾಕುತ್ತಾಳೆ. ಅಲ್ಲದೆ ನರಸಣ್ಣ ಸುಮ್ಮನೆ ಇರುತ್ತಾನೆಯೇ?"

"ಕೇಳಿ ನೋಡುತ್ತೇನಪ್ಪಾ. ಸುಬ್ಬರಾಯರಿಗೆ ಎಷ್ಟು ಸಾಧ್ಯವೋ ಅಷ್ಟು ಕೊಡಿಸ್ತೀನಿ."

"ಆಗಲಿ. ಅಮ್ಮನ ಹತ್ತಿರ ಮಾತನಾಡಿ."

ಆಗಲಿ ಎಂದರು ಗಿರಿಯಪ್ಪ. ಅವರ ಮನಸ್ಸು ಬೇಸರಗೊಂಡಿತು.

ಈ ಧನದಾಹವೆಲ್ಲಾ ಫಣಿಯಮ್ಮನದು. ಹುಡುಗರು ಬಹಳ ಒಳ್ಳೆಯವರು ಎಂಬ ಭಾವನೆ ಅವರ ಮನಸ್ಸಿನಲ್ಲಿ ಬೇರೂರಿತ್ತು. ಶ್ರೀನಿವಾಸನ ಮಾತು, ಕೇಳಿ ಅವರ ನಂಬಿಕೆಯ ಸೌಧ ನೆಲಕ್ಕುರುಳಿತು.

'ಹುಡುಗ ಲಕ್ಷಣವಾಗಿದ್ದಾನೆ. ವಿದ್ಯಾವಂತ ಬುದ್ಧಿವಂತ. ಮುಂದಕ್ಕೆ ಬರುತ್ತಾನೆ. ಇವನಿಗೆ ಗೌರಿಯನ್ನು ಕೊಡಿಸಿದರೆ ಅವಳೂ ಸುಖವಾಗಿರುತ್ತಾಳೆ' ಎಂಬ ಭಾವನೆ ಗಿರಿಯಪ್ಪನವರಲ್ಲಿ ದೃಢವಾಗಿತ್ತು. ಹೇಗಾದರೂ ಈ ಲಗ್ನ ಕೂಡಿಸಬೇಕು ಎಂದು ನಿಶ್ಚಯಿಸಿಕೊಂಡೇ ಹಾವಿನ ಹುತ್ತದಲ್ಲಿ ಕೈಯಿಟ್ಟಿದ್ದರು.

ಗೌರೀಗೆ ಒಳ್ಳೆಯ ಗಂಡು ಹುಡುಕುವುದರಲ್ಲಿ ಗಿರಿಯಪ್ಪ ಹೆಚ್ಚು ಆಸಕ್ತಿ ವಹಿಸುವುದಕ್ಕೆ ಎರಡು ಕಾರಣಗಳಿದ್ದವು. ಗೌರಿಯನ್ನು ಕಂಡರೆ ಗಿರಿಯಪ್ಪನವರಿಗೆ ಪಂಚಪ್ರಾಣ. ಅವಳು ಅಂಬೆಗಾಲಿಕ್ಕುತ್ತಿದ್ದಾಗಿನಿಂದ ಆಡಿಸಿ ಕುಣಿಸಿ ನಲಿದಿದ್ದರು. ಅವಳ ಗಾಂಭೀರ್ಯ, ಉದಾತ್ತವೃತ್ತಿ ವಯಸ್ಸಿಗೆ ಮೀರಿದ ವಿಚಾರಪೂರ್ಣ ಮಾತುಕತೆ ಅವರನ್ನು ಸರೆಹಿಡಿದಿದ್ದವು. ಇದಕ್ಕೂ ಪ್ರಬಲವಾದ ಕಾರಣ ಮತ್ತೊಂದಿತ್ತು. ಸುಬ್ಬರಾಯರ ಮೊದಲನೆಯ ಮಗಳು ಸೀತಾಲಕ್ಷ್ಮಿಯ ಲಗ್ನ ಕೂಡಿಸಿದ್ದವರೂ ಗಿರಿಯಪ್ಪನವರೇ. ಅವಳು ರಕ್ಕಸ ಜಾತಿಯ ಅತ್ತೆ ಮಾವ ಗಂಡನ ಕೈಗೆ ಸಿಕ್ಕಿ ಪಡುತ್ತಿದ್ದ ಪಾಡನ್ನು ಕಂಡು ಮಮ್ಮಲ ಮರುಗಿದ್ದರು. ತಮ್ಮಿಂದ ಇಂಥ ಅವಿವೇಕವಾಯಿತಲ್ಲಾ—ಗಿಣಿಯಂಥ ಹುಡುಗಿಯನ್ನು ಗಿಡುಗನ ಬಾಯಿಗೆ ಗಿಡುಗಿದಂತಾಯಿತಲ್ಲಾ ಎಂಬ ಸಂತಾಪ ಅವರ ಕರುಳನ್ನಿರಿಯುತ್ತಿತ್ತು. ಈಸಾರೆ ಸರಿಯಾದ ಕಡೆಗೆ ಗೌರಿಯನ್ನು ಸೇರಿಸಿ ಹಿಂದಿನ ಪಾಪಲೇಪವನ್ನು ತೊಳೆದುಕೊಳ್ಳಬೇಕೆಂದು ಅವರ ನಿರ್ಧಾರ.

೪

ಸೀತಾಲಕ್ಷ್ಮಿ ಹಾಸಿಗೆಯ ಮೇಲೆ ಹೊರಳಾಡುತ್ತಿದ್ದಳು. ಜ್ವರದ ತಾಪ ಅವಳನ್ನು ಸುಡುತ್ತಿತ್ತು. ಪಕ್ಕದಲ್ಲಿ ದಾದಿ ಬಟ್ಟೆ ಒದ್ದೆ ಮಾಡಿಮಾಡಿ ಹಣೆಯ ಮೇಲೆ ಹಾಕುತ್ತಿದ್ದಳು. ಸೀತೆ ಒಂದೇ ಸಮನಾಗಿ 'ಅಮ್ಮಾ—ಅಮ್ಮಾ' ಎಂದು ಚೀರುತ್ತಿದ್ದಳು. ಅವಳ ಆರ್ತರೋದನ ದಾದಿಯ ಕಣ್ಣು

ಗಳಲ್ಲಿ ನೀರು ತರಿಸುತ್ತಿತ್ತು. ದಾದಿಯೊಬ್ಬ ನಾಲಗೆಕೆಳಗೆ ಥರ್ಮಾಮೀಟರ್ ಇಟ್ಟು ಅದನ್ನು ಬೆಳಕಿನಲ್ಲಿ ನೋಡುತ್ತ ನಿಂತಿದ್ದಳು. ಟಪ—ಟಪ ಎಂದು ಷೂಸಿನ ಶಬ್ದವಾಯಿತು. ಕತ್ತೆತ್ತಿ ನೋಡಿದಳು.

"ಎಷ್ಟಿದೆ ಟೆಂಪರೇಚರ್ ನರ್ಸ್?"

"೧೦೪-೫"

"ಇನ್ನೂ ಕಡಿಮೆಯಾಗಿಲ್ಲವೆ?"

"ಆಗಿಲ್ಲ"

"ಸರಿ"

ನರ್ಸ್ ಕ್ಷಣಕಾಲ ಬಂದಿದ್ದವನನ್ನು ಆಪಾದಮಸ್ತಕ ನೋಡಿದಳು. ತಲೆಯಿಂದ ಎಣ್ಣೆ ಸುರಿಯುತ್ತಿರುವಂತೆ ಬಾಚಿದ ಕ್ರಾಪು. ಕಣ್ಣುಗಳಿಗೆ ದಪ್ಪ ಚೌಕಟ್ಟಿನ ದಪ್ಪ ಕನ್ನಡಕ, ಕೊರಳಿಗೆ ಕೊಳೆತುಂಬಿದ ಕೆಂಪುಟೈ, ಹಾಕಿರುವುದು ಹಳೆಯಕಾಲದ ಟಸರ್‌ಸೂಟ್, ಕೈಯಲ್ಲಿ ನಾಲ್ಕೈದು ಪುಸ್ತಕಗಳು. ಆಳು ಐದು ಅಡಿ ಮೂರು ಅಂಗುಲವಿರಬಹುದು. ಮುಖ, ಹೊಟ್ಟೆ, ಪೃಷ್ಠ ಎಲ್ಲಾ ಕೆಲವು ಗುಂಡುಗಳ ಸಮ್ಮೇಳನ. ಮಾತುಗಳು, ಸಾಕಷ್ಟು ಲಾಲಾರಸಭರಿತವಾಗಿ ಎರಡು ದಪ್ಪ ತುಟಿಗಳ ಮಧ್ಯದಿಂದ ಜೀವ ತಪ್ಪಿಸಿಕೊಳ್ಳುವಂತೆ ಬರುತ್ತಿದ್ದುವು.

"ಈತನೇ ಈ ಬಡಪಾಯಿಯ ಪತಿಯೇ! ಕಾಲೇಜಿನಲ್ಲಿ ಮೇಷ್ಟ್ರು" ಎಂದು ನರ್ಸ್ ನಿಟ್ಟುಸಿರ್ಗರೆದು.

"ನಾನು ಈ ವಾರ್ಡಿನ ನರ್ಸು."

ಎಂದು ತನ್ನ ಪರಿಚಯದಿಂದ ಆರಂಭಿಸಿದಳು. ಸೀತಾಲಕ್ಷ್ಮಿಯನ್ನು ಆಸ್ಪತ್ರೆ ಸೇರಿಸಿ ೧೫ ದಿವಸಗಳ ಮೇಲಾಗಿತ್ತು. ಈ ನರ್ಸನ್ನೇ ಕೇಶವಯ್ಯ ದಿನಕ್ಕೆ ಮೂರುಸಲ ಹದಿನೈದು ದಿವಸಗಳಿಂದ ನೋಡಿದ್ದ. ಆಕೆ ಆರಂಭಿಸಿದ ಪರಿಚಯದ ಮಾತು ಕೇಳಿ ಅವನಿಗೆ ನಗೆ ಬಂದಿತು

"ಇದೇನು ಹೊಸದಾಗಿ ಹೇಳುವಿರಲ್ಲಾ. ನನಗೆ ಗೊತ್ತಿಲ್ಲವೆ?"

"ನಾನು ಕ್ರಿಶ್ಚಿಯನ್ ಜಾತಿ."

"ಹೌದು-ಹೌದು"

"ನಾನೂ ಹೆಣ್ಣಾಗಿ ಹುಟ್ಟಿದ್ದೇನೆ."

" ನಿಃಸಂಶಯವಾಗಿ "

ನರ್ಸನ್ನೇ ಆಸ್ಪತ್ರೆ ಸೇರಿಸಬೇಕಾದ ಕಾಲ ಬಂತೆಂದು ಕೇಶವಯ್ಯ ಲೆಕ್ಕ ಹಾಕತೊಡಗಿದ.

" ಇಷ್ಟೆಲ್ಲ ಪೀಠಿಕೆ ಏಕೆ ನರ್ಸ್ "

" ನಮ್ಮ ಬೈಬಲ್‌ನಲ್ಲಿ ಪ್ರಾಣಿದಯೆಗೆ ಬಹಳ ಬೆಲೆ ಕೊಟ್ಟಿದ್ದಾರೆ. ಯೇಸುಸ್ವಾಮಿ."

" ನಮ್ಮ ಧರ್ಮದಲ್ಲಿಯೂ ಹಾಗೆಯೇ. 'ಅಹಿಂಸಾ ಪರಮೋ ಧರ್ಮಃ' ಎಂದು ಸಾರಿದೆ."

" ನನಗೆ ಹಾಗನಿಸುವುದಿಲ್ಲ."

" ಏಕೆ ?"

" ನಿಮ್ಮ ವರ್ತನೆಯಿಂದ "

" ಏನು ನನ್ನ ವರ್ತನೆ."

" ಈ ಮಗು ಈಗ ಹದಿನೈದು ದಿವಸಗಳಿಂದ ಇಲ್ಲಿ ಬಿದ್ದಿದೆ. ಒಂದೇ ಸಮನಾಗಿ 'ಅಮ್ಮಾ–ಅಮ್ಮಾ' ಎಂದು ಅರಚಿಕೊಳ್ಳುತ್ತಿದೆ. ಇದರ ತಾಯಿಯನ್ನೇಕೆ ನೀವು ಕರೆಸುವುದಿಲ್ಲ."

" ಅವರು ಬರದಿದ್ದರೆ ನಾನೇನು ಮಾಡಲಿ."

" ಸುಳ್ಳು–ನೀವು ಸುಳ್ಳು ಹೇಳುತ್ತಿರುವಿರಿ."

" ಹಲ್ಲು ಹಿಡಿದು ಮಾತಾಡಿ ನರ್ಸ್—ಮೇಲಕ್ಕೆ ನಾನು ರಿಪೋರ್ಟು ಮಾಡಬೇಕಾದೀತು."

"ನನ್ನ ಹೆದರಿಸಬೇಡಿ ಮಿ. ಕೇಶವಯ್ಯ. ನಿಮ್ಮ ನಡತೆಯನ್ನು ನಾನೂ ನಿಮ್ಮ ವೈಸ್‌ಚಾನ್ಸಲರ್‌ಗೆ ರಿಪೋರ್ಟು ಮಾಡಬಹುದು."

ಕೇಶವಯ್ಯನ ತಲೆಯ ಎಣ್ಣೆ ಮುಖದ ಮೇಲೆ ಹರಿಯಿತು. ಮೈ ಬೆವರಿತು. ಉಸಿರು ಎಳೆಯುತ್ತ " ಅವರ ತಾಯಿಯನ್ನು ಬರಬೇಡಿ ಎಂದು ನಾನು ಹೇಳಲಿಲ್ಲ " ಎಂದ.

" ಕಾಲೇಜ್ ಮೇಷ್ಟ್ರಾಗಿ ಮತ್ತೆ ಮತ್ತೆ ಸುಳ್ಳು ಹೇಳುವಿರಲ್ಲಾ. ಈಕೆ ತಂದೆ ನಿತ್ಯ ಬಂದು ವಿಚಾರಿಸಿಕೊಂಡು ಹೋಗುತ್ತಾರೆ. 'ಹುಡುಗಿ ತಾಯಿಯನ್ನು ಕಳುಹಿಸಿಕೊಡಿ' ಎಂದು ನಾನು ಹೇಳಿದುದಕ್ಕೆ 'ಸಾಧ್ಯವಿಲ್ಲಮ್ಮ.

ಅವಳ ಯಜಮಾನರು ನಾವು ಯಾರೂ ಹುಡುಗಿಯನ್ನು ನೋಡಕೂಡದೆಂದು ಕಟ್ಟಪ್ಪಣೆ ಮಾಡಿದ್ದಾರೆ' ಎಂದು ಕಣ್ಣೀರು ಹಾಕಿಕೊಂಡು ಹೇಳಿದರು."

" ರ್‍ಯಾಸ್ಕಲ್ "

" ನಿಮ್ಮನ್ನು ನೀವೇ ಹಾಗೆ ಬಯ್ದುಕೊಳ್ಳಬಾರದು, ಪ್ರೊಫೆಸರೆ "

" ನನ್ನನ್ನಲ್ಲ ಬಯ್ದದ್ದು—ಆ—ಆ "

ಎನ್ನುತ್ತ ಕೇಶವಯ್ಯ ಅಲ್ಲಿ ನಿಲ್ಲದೆ ಹೊರಟುಹೋದ. ನರ್ಸ್ ರೋಗಿಯ ಪಕ್ಕದಲ್ಲಿ ಕುಳಿತು ನೇವರಿಸುತ್ತಾ " ಪೂರ್ ಡಿಯರ್ (Poor dear)" ಎಂದಳು.

ಮಾರನೆಯ ದಿವಸ ಸರದಿಯಂತೆ ಸುಬ್ಬರಾಯರು ಮಗಳನ್ನು ನೋಡಲು ಆಸ್ಪತ್ರೆಗೆ ಹೋದರು. ಹೊರಗೇ ಕುಳಿತು ನರ್ಸ್ ಮೇರಿಗೆ ಹೇಳಿಕಳುಹಿಸಿದರು.

" ಹೇಗಿದ್ದಾಳಮ್ಮಾ—ನಿಮ್ಮ ಪೇಷಂಟ್."

" ಇನ್ನು ನಮ್ಮ ಪೇಷಂಟ್ ಅಲ್ಲ ಸಾರ್."

" ಹಾ ! "

" ಗಾಬರಿಯಾಗಬೇಡಿ. ಹೆಚ್ಚು ಕಡಿಮೆಯಾಗಿಲ್ಲ. ಬೆಳಗ್ಗೆ ಆಕೆ ಯಜಮಾನರು ಡಿಸ್‌ಚಾರ್ಜ್ ಮಾಡಿಸಿ ಕರೆದುಕೊಂಡು ಹೋದರು."

" ಎಲ್ಲಿಗೆ ಹೋದರು ಗೊತ್ತಾಯಿತೆ."

"ಪ್ರಾಯಶಃ ಬೌರಿಂಗ್ ಆಸ್ಪತ್ರೆಗೆ ಕರೆದುಕೊಂಡು ಹೋಗಿರ ಬಹುದು. ಟ್ಯಾಕ್ಸಿ ಮಾಡಿಕೊಂಡು ಬಂದಿದ್ದರು."

ಸುಬ್ಬರಾಯರು ಭೂಮಿಗೇ ಇಳಿದುಹೋದರು. ಮಕ್ಕಳಂತೆ ಅಳುತ್ತ ಕುಳಿತುಬಿಟ್ಟರು.

" ಯೋಚನೆ ಮಾಡಬೇಡಿ ಸಾರ್. ಬೌರಿಂಗ್ ಆಸ್ಪತ್ರೆಯಲ್ಲಿಯೂ ಚೆನ್ನಾಗಿ ನೋಡಿಕೊಳ್ಳುತ್ತಾರೆ."

" ನೀನೇ ತಾಯಾಗಿದ್ದೆಯಮ್ಮಾ"

ಎಂದರು. ಕಂಠ ಬಿಗಿದುಬಂತು. ನರ್ಸ್ ಕಣ್ಣುಗಳಲ್ಲಿ ನೀರು ತುಂಬಿತು. ಸುಬ್ಬರಾಯರನ್ನು ಸಮಾಧಾನಮಾಡುತ್ತಾ ಹಿಂದಿನ ದಿನ ನಡೆದುದನ್ನು ವಿವರಿಸಿ

" ನಿಮ್ಮ ಅಳಿಯಂದಿರಿಗೆ ಏಕೆ ಸಾರ್ ನಿಮ್ಮ ಮೇಲಿಷ್ಟು ಕೋಪ."

" ಅವರನ್ನು ನಾವು ವಿಲಾಯಿತಿಗೆ ಕಳುಹಿಸಲಿಲ್ಲವಂತೆ—ಇದೇ ನಮ್ಮ ಅಪರಾಧ."

" ಹಣ ಕೊಡಲಿಲ್ಲಾಂತ ಹೆಂಡತಿ ಕೊಲೆ ಮಾಡೋದೆ ? "

" ಮದುವೆಯಾದ ದಿವಸದಿಂದಲೂ ಇದೇ ರಾಮಾಯಣ ನಡೆದಿದೆ ಯಮ್ಮಾ. ನಮ್ಮ ಶಕ್ತಿ ಮೀರಿ ತೆತ್ತಿದೇವೆ. ಪುಸ್ತಕಗಳಾಯಿತು--ಬಟ್ಟೆ ಬರೆಯಾಯಿತು—ಆಲ್ ಇಂಡಿಯಾ ಟೂರಾಯಿತು—ರೇಡಿಯೋ ಆಯಿತು. ಸೈಟಾಯಿತು—ಈಗ ಮನೆ ಕಟ್ಟುವುದಕ್ಕೆ ಹಣ ಬೇಕಂತೆ. ಹಣ ಬೇಕೂಂತ ಕಾಗದ ಬರೆದರು. ' ನಾವು ಬಡವರು. ೬,೦೦೦ ರೂಪಾಯಿ ಎಲ್ಲಿಂದ ತರೋಣ ' ಎಂದು ಬರೆದುದಕ್ಕೆ ನನ್ನ ಹೀನಾವಮಾನ ಬಯ್ದು ಬರೆದರು. ಜತೆಗೆ ನನ್ನ ಹೆಂಡತೀನ ಹೊಲತಿಮಾಡಿ ತುಚ್ಛವಾದ ಮಾತುಗಳನ್ನು ಬರೆದರು. ಈಗ ಸೀತೂನ ಹಿಂಸೆ ಮಾಡಿದರೆ ಹಣ ಹೇಗಾದರೂ ಬರುತ್ತೆ ಎಂದು ಹಂಚಿಕೆ ಹೂಡಿದ್ದಾರೆ. ನಾನು ದಿವಾನರ ಆಫೀಸಿನಲ್ಲಿ ಒಬ್ಬ ಗುಮಾಸ್ತೆ. ನನ್ನ ಸಂಬಳದಲ್ಲಿ ಸಂಸಾರ ಸಾಗಬೇಕು. ಮದುವೆಯಾಗೋ ಮಗುವೊಂದು ಮನೆಯಲ್ಲಿ ಕುಳಿತಿದೆ. ನಾನು ಏನುಮಾಡಲಿ ತಾಯಿ."

ನರ್ಸ್ ನಿರುತ್ತರಳಾದಳು. ಅವಳ ಅಂತಃಕರಣ ಕಲಮಲಗೊಂಡಿತ್ತು. ಸುಬ್ಬರಾಯರು ಎದ್ದು ನಿಂತರು. ನರ್ಸ್ ಕರುಣೆ ತುಂಬಿದ ದನಿಯಲ್ಲಿ, " ನನ್ನ ಕೈಯಲ್ಲಿ ಏನು ಸಾಧ್ಯ ಹೇಳಿ ಸಾರ್. ನಾನು ಮಾಡುತ್ತೇನೆ."

" ಏನೂ ಬೇಡ ತಾಯಿ, ನೀನು ಈಗ ಮಾಡಿರೋ ಉಪಕಾರದ ಋಣ ಜನ್ಮ ಜನ್ಮಕ್ಕೂ ತೀರಿಸಲು ಸಾಧ್ಯವಿಲ್ಲ. ದೇವರು ನಿನಗೆ ಒಳ್ಳೆಯದು ಮಾಡಲಿ "

ಎಂದು ಹೊರಟರು. ಕಾಲಿಗೆ ಅವರ ದೇಹ ಅಂದು ಬಹು ಭಾರ ವಾಗಿ ಕಂಡಿತು.

*

ಗಿರಿಯಪ್ಪ ಹಟಮಾರಿ ಎಂದು ಪ್ರಸಿದ್ಧರಾಗಿದ್ದರು. ಅವರ ತಲೆಗೆ ಒಂದು ವಿಚಾರ ಹೊಳೆಯುವುದೇ ತಡ, ಅದನ್ನು ಒಂದು ನಿಲುಗಡೆಗೆ

ತರದಿದ್ದರೆ ಅವರಿಗೆ ಸಮಾಧಾನವಿಲ್ಲ. ತಮ್ಮ ಸ್ವಂತ ಕೆಲಸವಾಗಲಿ ಬೇರೆಯವರ ಕೆಲಸವಾಗಲಿ ಒಂದೇ.

ಬೆಂಗಳೂರಿಗೆ ಬಂದಾಗಲೆಲ್ಲಾ ಗಿರಿಯಪ್ಪ ವೆಂಕಟಾಚಲಯ್ಯನವರ ಮನೆಯಲ್ಲಿಯೇ ಇಳಿಯುತ್ತಿದ್ದರು. ವೆಂಕಟಾಚಲಯ್ಯನಾಗಲಿ ಫಣಿಯಮ್ಮ ನಾಗಲಿ ಅತಿಥಿಸತ್ಕಾರಕ್ಕೆ ಪ್ರಸಿದ್ಧರಾಗಿರದಿದ್ದರೂ ಗಿರಿಯಪ್ಪನ ಬಗ್ಗೆ ಅವರು ಧಾರಾಳವಾಗಿಯೇ ವರ್ತಿಸುತ್ತಿದ್ದರೆಂದು ಹೇಳಬಹುದು. ಗಿರಿಯಪ್ಪ ಮನಸ್ಸು ಮಾಡಿದರೆ ತಮ್ಮ ಜಮೀನು ಬಂಜರು ಬೀಳುವಂತೆ ಮಾಡಲು ಶಕ್ತರೆಂಬ ಭಯವೇ ಕಾರಣ.

ಊಟ ಮುಗಿಸಿಕೊಂಡು ಬಂದು ತೊಟ್ಟಿಯಲ್ಲಿ ವೆಂಕಟಾಚಲಯ್ಯ ಗಿರಿಯಪ್ಪ ಎಲಡಿಕೆ ಹರಿವಾಣ ಇಟ್ಟುಕೊಂಡು ಕುಳಿತರು. ಆ ಮಾತು ಈ ಮಾತು ಸಾಗಿ ಕೊನೆಗೆ ಶ್ರೀನಿವಾಸನ ಮದುವೆ ವಿಷಯಕ್ಕೆ ಬಂದು ನಿಂತಿತು.

" ಅವಳೂ ಬರಲಿ " ಎಂದರು ವೆಂಕಟಾಚಲಯ್ಯ.

ಫಣಿಯಮ್ಮ ಊಟ ಮುಗಿಸಿಕೊಂಡು ದವಡೆಯಲ್ಲಿ ಒಂದು ಅಡಿಕೆ ಹೋಳನ್ನು ಒತ್ತರಿಸಿಕೊಂಡು ಬಂದು ಹೊಸಲು ಪಕ್ಕದಲ್ಲಿ ಕುಳಿತರು. ಇವ ರಾಡುವ ಮಾತುಗಳು ಚೆನ್ನಾಗಿ ಕೇಳಿಸುವಂತೆ ಬಾಗಿಲು ಅರ್ಧ ತೆರೆದು ಶ್ರೀನಿವಾಸ ತನ್ನ ಕೋಣೆಯಲ್ಲಿ ಪುಸ್ತಕ ಹಿಡಿದು ಕುಳಿತಿದ್ದ.

"ಗಿರಿಯಪ್ಪ ಏನೋ ಹೇಳುತ್ತಿದ್ದಾರಲ್ಲೇ!" ಎಂದರು ವೆಂಕಟಾ ಚಲಯ್ಯ.

" ಏನದು ಶ್ಯಾನುಭೋಗರೇ ?"

" ಅದೇ—ಶೀನೂ ಮದುವೆ ವಿಷಯ."

" ಇನ್ನೊಂದೆರಡು ವರ್ಷ ಹೋಗಲಿ. ಈಗಲೇ ಏನವಸರ ?"

" ಅವಸರಾಂದ್ರೆ—ಈಗೇನು ಅವನಿಗೆ ಕಮ್ಮಿ ವಯಸ್ಸಾಗಿದೆಯೇನಮ್ಮ. ಕಾಲೋಚಿತವಾಗಿ ಶುಭಕೆಲಸಗಳು ನಡೆದರೆ ಚೆನ್ನು."

" ಈಗ ಅಂಥ ಅಣಿಯಾದ ಕಡೆ ಯಾವದಿದೆ ?"

" ಸುಬ್ಬರಾಯರ ಮಗಳು ಒಂದು ಹುಡುಗಿ ಇದೆಯಂತ ಗಿರಿಯಪ್ಪ ಹೇಳಿದ್ದು ಮರೆತುಬಿಟ್ಟೆಯೇನೇ ?"

" ಅದೇ........"

ಎಂದು ಫಣಿಯಮ್ಮ ರಾಗ ಎಳೆದರು.

"ಏಕೆ? ಸಂಬಂಧ ಏನಾಗಿದೆ?"

"ಏನೂಯಿಲ್ಲ. ಸೀನೂ ಮುಂದೆ ಓದಬೇಕೂಂತ ಹಟ ಹಿಡಿದಿದ್ದಾನೆ. ನಮ್ಮ ಚೈತನ್ಯ ನೀವು ಕಂಡಹಾಗೆ ಉಡುಗಿಹೋಗಿದೆ. ಅವನ ಮಾವ ನಾಗುವವರು ಈ ಹೊರೆ ಹೊರಬೇಕಾಗುತ್ತದೆ."

"ಆ ವಿಷಯ ಆಮೇಲೆ ಮಾತನಾಡೋಣ. ಮೊದಲು ಹೆಣ್ಣು ನೋಡಿ. ಸೀನೂನು ಹೆಣ್ಣು ನೋಡಿ ಒಪ್ಪಿದ ಮೇಲೆ ಮುಂದಿನ ಮಾತು"

"ಅವನೇನು ಒಪ್ಪೋದು. ನಾವು ಒಪ್ಪಿದರೆ ಆಯಿತು. ನಮ್ಮ ಹುಡುಗರಿಗೆ ಇನ್ನೂ ಅಷ್ಟು ಸ್ವಾತಂತ್ರ್ಯ ನಾವು ಕೊಟ್ಟಿಲ್ಲ ಶಾನುಭೋಗರೇ" ಎಂದರು ಫಣಿಯಮ್ಮ.

"ನಮ್ಮ ನಿಮ್ಮ ಕಾಲ ಬೇರೇಮ್ಮ. ಇದು ಹೊಸಕಾಲ. ಗಂಡು ಹೆಣ್ಣು ಪರಸ್ಪರ ಒಪ್ಪಿದ ಹೊರತೂ ಬೇರೆ ಮಾತು ಸಾಧ್ಯವಿಲ್ಲ."

"ನಾವು ಬದುಕಿರೋ ತನಕ ಇದು ನಮ್ಮ ಕಾಲವೇ. ನಾವು ಕಣ್ಮುಚ್ಚಿಕೊಂಡ ಮೇಲೆ ಹುಡುಗರು ಬೇಕಾದ್ದು ಮಾಡಿಕೊಳ್ಳಬಹುದು"

ವೆಂಕಟಾಚಲಯ್ಯ ತುಟಿಪಿಟಕ್ಕೆನ್ನಲಿಲ್ಲ. ಒಂದಾಗುತ್ತಲೊಂದು ಎಲೆ ಯನ್ನು ಸುಣ್ಣ ಸವರಿ ಒಳಗೆ ತುರುಕುತ್ತ ಕುಳಿತಿದ್ದರು.

"ಈ ಸಂಬಂಧ ಮಾಡಿಸಬೇಕೂಂತ ನಿಮಗೆ ಆಸಕ್ತಿಯಿದ್ದರೆ ಸೀನೂ ಓದೋ ವಿಷಯ ಮೊದಲು ಇತ್ಯರ್ಥಮಾಡಬೇಕು ಶಾನುಭೋಗರೇ."

ಫಣಿಯಮ್ಮನವರ ನಿರ್ಧಾರದ ಮುಂದೆ ಗಿರಿಯಪ್ಪನವರ ಆಟ ಸಾಗ ಲಿಲ್ಲ. ಅವರಿಗೆ ವಿರೋಧವಾಗಿ ಹೇಳಿದರೆ ಕೆಲಸ ಕೆಡುತ್ತದೆಂದು ಅವರು ಗ್ರಹಿಸಿದರು.

"ಸೀನೂನೇ ಕರೆದು ಒಂದು ಮಾತು ಕೇಳೋಣ."

"ಏನು! ಓದೋ ವಿಷಯವೇ?"

"ಓದೋದಂತೂ ಖಂಡಿತವಾಯಿತಲ್ಲ. ಓದೋದಿಕ್ಕೆ ಹಣ ಎಷ್ಟಾಗ ಬೇಕು ಅನ್ನೋದು."

"ಕೇಳಿ."

"ಸೀನೂ...."

ಎಂದರು. ಸೀನೂ ಕೈಯಲ್ಲಿ ಪುಸ್ತಕ ಹಿಡಿದೇ ಮೆಳ್ಳಿಯಹಾಗೆ ಬಂದ.

“ ಏನಮ್ಮ ?”

ಶಾನುಭೋಗರು ಏನೋ ಕೇಳೋದಿಕ್ಕೆ ಕರೆದರಪ್ಪಾ.”

“ ಏನು ಶಾನುಭೋಗರೆ ?”

“ ಈ ವರ್ಷ ಬಿ.ಎ. ಮುಗಿಸಿದ ಮೇಲೆ ಮುಂದೆ ಯಾವದಕ್ಕೆ ಓದ್ತೀಯಪ್ಪಾ ?”

“ ಲಾ ಪರೀಕ್ಷೆಗೆ ಓದಬೇಕೂಂತಿದೀನಿ.”

“ ಎಷ್ಟು ವರ್ಷ ?”

“ ಬೊಂಬಾಯಿಗೆ ಹೋಗಿ ಸೇರಿದರೆ ಜತೆಯಲ್ಲಿ ಎಂ.ಎ. ಪರೀಕ್ಷೆಯನ್ನೂ ಮಾಡಿಕೊಳ್ಳಬಹುದು—ಎಲ್ಲಾ ಸುಮಾರು ಮೂರುವರ್ಷ ಹಿಡಿಯುತ್ತೆ.”

“ ಖರ್ಚು ಎಷ್ಟು ಬರಬಹುದು.”

“ ಐದಾರು ಸಾವಿರವಾಗಬಹುದು.”

“ ಸರಿ. ಲಾ ಪರೀಕ್ಷೆಗೆ ೬ ಸಾವಿರ, ಮದುವೆ ಖರ್ಚು ಇತ್ಯಾದಿ ೨ ಸಾವಿರ, ಅಳಿಯ ಮಗಳಿಗೆ ಕೊಡುವುದು ಉಡುಗೊರೆ, ಪಾತ್ರೆ ಪದಾರ್ಥ ೨ ಸಾವಿರ ಎಲ್ಲಾ ಒಟ್ಟು ೧೦ ಸಾವಿರವಾಗುತ್ತೆ.”

“ ಹೂ—ಆಗತ್ತೆ. ಆಗದೇ ಇರತ್ತ್ಯೇ ?” ಎಂದರು ಫಣಿಯಮ್ಮ.

“ ಇಲ್ಲೇ ಕೂತುಕೊಂಡು ಪ್ಲೀಡರ್ ಪರೀಕ್ಷೆಗೆ ಓದಿದರೆ ಆಗಲ್ವೇ ಸೀನಣ್ಣ.”

“ ಹೇಗಾಗುತ್ತೆ ಮಾವಯ್ಯ. ಪ್ಲೀಡರ್ ಆಗಿ ಕಂತ್ರಿ ಲಾಯರ್ ಅನ್ನಿಸಿಕೊಳ್ಳುವುದಕ್ಕೆ ನನಗೆ ಇಷ್ಟವಿಲ್ಲ.”

“ ನಿಮ್ಮ ಅಭಿಪ್ರಾಯವೇನು ವೆಂಕಟಾಚಲಯ್ಯ.”

“ ಈಗಿನ ಕಾಲದ ಹುಡುಗರು. ಅವರ ಇಷ್ಟಾನುಸಾರ ನಾವು ನಡೆದುಕೊಳ್ಳಬೇಕಾಗತ್ತೆ.”

“ ಈಗತಾನೆ ‘ನಾವು ಬದುಕಿರೋ ತನಕ ಇದು ನಮ್ಮ ಕಾಲ’ ಎಂದು ಫಣಿಯಮ್ಮನವರು ಹೇಳಿದರು.”

“ ನೋಡಿ ಗಿರಿಯಪ್ಪ, ಕೇಳೋ ವಿಷಯ ಕೇಳಬೇಕು-ಹೇಳೋ

ವಿಷಯ ಹೇಳಬೇಕು. ಎಲ್ಲದಕ್ಕೂ ಹಿರಿಯರು ದರ್ಪ ತೋರಿಸುವುದಕ್ಕೆ ಸಾಧ್ಯವಾಗತ್ತೆಯೇ?"

"ಹೆಣ್ಣು ನೋಡಿ ಬರೋದಿಕ್ಕೆ ಅಭ್ಯಂತರವೇನೂ ಇಲ್ಲವಲ್ಲಾ"

"ಅದಕ್ಕೇನು ಅಭ್ಯಂತರ"

ಎಂದು ವೆಂಕಟಾಚಲಯ್ಯನವರನ್ನುತ್ತಿರುವಂತೆ ಫಣಿಯಮ್ಮ ಬಾಯಿ ಹಾಕಿ,

"ಅದೇನು ಒಪ್ಪಿಗೆ ಕೊಟ್ಟಿಹಾಗಲ್ಲ ಶಾನುಭೋಗರೇ—ಆ ವಿಷಯ ಖಂಡಿತ ತಿಳಿದುಕೊಳ್ಳಿ. ನಾನು ಮಾತು ಕೊಟ್ಟುಬಿಟ್ಟೆ ಎಂದು ನೀವು ಮುಂದೆ ಪೇಚಾಡಬಾರದು."

"ನೋಡಿಯಮ್ಮ ಸೀನೂಗೆ ಒಳ್ಳೆ ಕಡೆ ಮದುವೆಯಾಗಲಿ. ಅವನು ಸಂತೋಷವಾಗಿರಲಿ ಎಂದು ನನ್ನ ಇಷ್ಟ. ಇದರಿಂದ ನನಗೇನೂ ಲಾಭ ವಿಲ್ಲ. ಹೆಣ್ಣು ಹೆತ್ತವರ ಸಂಕಟ ನೋಡಿ ಹೊಟ್ಟೆ 'ಚುರ್' ಅನ್ನತ್ತೆ—ಈ ಕೆಲಸ ಕೈಗೊಳ್ಳುತ್ತೇನೆ. ನೀವಾದರೂ ಸರಿಯಾದ ಸೊಸೆ ಬರಬೇಕು ಎಂದು ಯೋಚಿಸಬೇಕಲ್ಲದೆ, ಸೊಸೆ ಎಷ್ಟು ಹಣ ತರುತ್ತಾಳೆ ಎಂದು ಲೆಕ್ಕ ಹಾಕಬಾರದು. ಹತ್ತು ಸಾವಿರದ ಗೋಪಾಳದ ರೂಪಾಯಿ ಸಂಪಾದನೆ ಮಾಡಲಾಗದಷ್ಟು ಮತ್ಲಾಳನಲ್ಲ ಸೀನೂ."

"ನೀವು ಹೇಳೋದು ಚೆನ್ನಾಗಿದೆಯಲ್ಲ. ಏನು ಎರಡು ಕಡೆಯ ಖರ್ಚನ್ನೂ ನಾವೇ ವಹಿಸಿ ಲಗ್ನವಾಗಬೇಕು ಅಂತೀರೇನು?"

"ಆ ಮಾತು ನಾನು ಹೇಗೆ ಹೇಳಲಿ. ಸುಬ್ಬರಾಯರು ಶಕ್ತಿಮೀರಿ ಕೊಡುವುದಕ್ಕೆ ಸಿದ್ಧರಾಗಿದ್ದಾರೆ. ನೀವು ಅನುಕೂಲ ಅನಾನುಕೂಲ ನೋಡಬೇಕು........................ಹೆಣ್ಣು ನೋಡಿದ್ದಾಗಲಿ ಮುಂದೆ ವಿಚಾರ ಮಾಡೋಣ. ನೀವು ನಾಳೆ ಸಂಜೆ ಬರುತ್ತೀರೆಂದು ಹೇಳಿಕಳುಹಿಸಬಹುದಷ್ಟೆ."

"ಆಗಬಹುದು" ಎಂದು ಹೇಳಿ ಫಣಿಯಮ್ಮ ಎದ್ದು ಹೋದರು.

೬

ಮನೆ ಸೇರುವ ಹೊತ್ತಿಗೆ ಸುಬ್ಬರಾಯರಿಗೆ ಸಾಕು ಸಾಕಾಗಿ ಹೋಗಿತ್ತು

ಗಾಡಿ ಬಾಡಿಗೆ ಎರಡು ಮೂರು ರೂಪಾಯಿ ಕುಕ್ಕಬೇಕಲ್ಲಾ ಎಂದು ಆದಷ್ಟು ನಡೆದಿದ್ದರು. ಮೇಲೆಉಗ್ರ ಬಿಸಲಿನ ತಾಪ; ಒಳಗೆ ಮಗಳ ಪರಿಸ್ಥಿತಿಯ ತಾಪ. ಮನೆಗೆ ಬಂದವರೇ ದೊಪ್ಪನೆ ಆರಾಮಾಸನದ ಮೇಲೆ ಬಿದ್ದು ಬಿಟ್ಟರು. ಗೌರಿ ಗಾಬರಿಯಾಗಿ ತಾಯಿಯನ್ನು ಕರೆತಂದಳು. ರಂಗಮ್ಮ ಕೂಡಲೇ ಒಂದು ಗ್ಲಾಸು ನಿಂಬೇಹಣ್ಣಿನ ಪಾನಕ ಮಾಡಿ ತಂದು ಗಂಡನಿಗಿತ್ತರು. ಪಾನಕ ಕುಡಿದ ಮೇಲೆ ಸುಬ್ಬರಾಯರಿಗೆ ಹೋದ ಜೀವ ಬಂದಂತಾಯಿತು.

"ಯಾಕೇಂದ್ರೆ, ಇಷ್ಟು ಸುಸ್ತು. ಒಂದು ಗಾಡಿ ಮಾಡಿಕೊಂಡು ಬರ ಬಾರದಾಗಿತ್ತೇ?"

"ಎಲ್ಲೀಗೇಂತ ಗಾಡಿ ಮಾಡಲಿ ಹೇಳು"

"ಆಸ್ಪತ್ರೀಗೆ ಹೋಗಿದ್ದಿರಾ?"

ಸುಬ್ಬರಾಯರು ಆಸ್ಪತ್ರೆಗೆ ಹೋಗಿದ್ದುದು, ನರ್ಸು ಹೇಳಿದುದು ಎಲ್ಲ ವನ್ನೂ ವರದಿ ಒಪ್ಪಿಸಿದರು.

"ಇದ್ಯಾಕೆ ಹೀಗೆ ನಮ್ಮ ಮೇಲೆ ವಿಷ ಕಾರುತ್ತಾರೋ. ಇವರಿಗೆ ನಾವು ಮಾಡಿದ ಅನ್ಯಾಯವೇನು?"

"ದುಃಖ ಪಡೋದು ನಮ್ಮ ಹಣೆಯಲ್ಲಿ ಬರೆದಿರುವಾಗ ಅನುಭವಿಸು ವುದಿಲ್ಲ ಅಂದರೆ ಆಗುತ್ತದೆಯೇ?"

"ಬೌರಿಂಗ್ ಆಸ್ಪತ್ರೆಗೆ ಹೋಗಿಬಂದಿರಾ?"

"ಅಲ್ಲಿಗೂ ಹೋಗಿ ಬಂದೆ. ಜ್ವರ ನಿಂತೇ ಇಲ್ಲವಂತೆ."

"ಅವರು ಏನಾದರೂ ಅಂದುಕೊಳ್ಳಲಿ ನನ್ನ ಕರೆದುಕೊಂಡು ಹೋಗಿ. ಕೊನೆಯ ದರ್ಶನವಾದರೂ ಮಾಡಿಬಿಡುತ್ತೇನೆ."

"ಪ್ರಾಣಕ್ಕೆ ಭಯವಿಲ್ಲಾಂತ ಡಾಕ್ಟರು ಹೇಳಿದರು."

"ನಿಮ್ಮ ಅಳಿಯಂದಿರು ಸಿಕ್ಕಿದ್ದರೇ?"

"ಇಲ್ಲ. ನಾನು ಹೋಗುವ ಹೊತ್ತಿಗೆ ಅವರು ಬಂದು ಹೋಗಿದ್ದರು"

"ಏನಾದರೂ ಆಗಲಿ. ನಾನೂ ಬರುತ್ತೇನೆ. ಬೆಳಿಗ್ಗೆ ಆಸ್ಪತ್ರೆಗ ಹೋಗಿ ಬರೋಣ."

"ಇವತ್ತು ಸಾಯಂಕಾಲಾನೇ ಹೋಗಿ ಬರೋಣ. ಗೌರಿ ಬರಲಿ ಲ್ಲವೇ ಅಂತ ಸೀತೂ ಕೇಳಿದಳು."

"ಓಹೋ! ಮರೆತಿದ್ದೆ. ಗಿರಿಯಪ್ಪನವರು ಬಂದಿದ್ದರು. ಸಾಯಂ ಕಾಲ ವೆಂಕಟಾಚಲಯ್ಯನವರ ಮನೆಯವರು ಗೌರಿ ನೋಡುವುದಕ್ಕೆ ಬರು ತ್ತಾರಂತೆ."

"ಇವತ್ತೇನೇ?"

"ಹೌದು ಶುಭಸ್ಯ ಶೀಘ್ರಂ ಎಂದು ಗಿರಿಯಪ್ಪ ಹೇಳಿಹೋದರು. ನೀವು ಸ್ನಾನ ಊಟ ಮಾಡಿ ಸ್ವಲ್ಪ ಪೇಟೆಗೆ ಹೋಗಿ ಬರಬೇಕು. ಹೂವು ಹಣ್ಣು, ವೀಳೇದೆಲೆ ತರಬೇಕು."

"ಇನ್ನೇನಾದರೂ ಸಾಮಾನು ಬೇಕೇನು?"

"ಎಲ್ಲಾ ಮನೇಲೇ ಇವೆ ಪಾತಕ್ಕನಿಗೆ ಹೇಳಿ ಕಳಿಸಿದ್ದೀನಿ. ತಿಂಡಿ ತೀರ್ಥ ಅವರು ಮಾಡಿಕೊಡುತ್ತಾರೆ"

"ಗಿರಿಯಪ್ಪ ಇನ್ನೇನು ಹೇಳಿದರು?"

"ಸಂಬಂಧ ಅನುಕೂಲವಾದ ಕಡೆಯದು. ಏನಾದರೂ ಇದನ್ನು ಬಿಡಬಾರದೂಂತ ಹೇಳಿದರು."

"ಹಾಗೆಂದರೆ?"

"ವರದಕ್ಷಿಣೆ ಕೊಟ್ಟಾದರೂ ಈ ಲಗ್ನ ಸಾಧಿಸಬೇಕೂಂತ ಅವರ ಇಚ್ಛೆ."

"ವರದಕ್ಷಿಣೆ ಕೊಡೋದಕ್ಕೆ ಮನಸ್ಸಿದೆ. ಆದರೆ ಅನುಕೂಲ ಎಲ್ಲಿಂದ ತರೋಣ."

"ನಮ್ಮ ವಿಷಯವೆಲ್ಲಾ ಗಿರಿಯಪ್ಪನವರಿಗೆ ಗೊತ್ತೇ ಇದೆ."

"ಗೊತ್ತಿದ್ದೂ ಅವರೇ ಈ ಮಾತು ಹೇಳಿದರೇ?"

"ಹೇಳದೇ ಏನು ಮಾಡುತ್ತಾರೇಂದ್ರೆ. ಗೌರೀಗೆ ವಯಸ್ಸಾಗುತ್ತಾ ಬಂತು. ಈಗ ಮುತುವರ್ಜಿ ವಹಿಸದಿದ್ದರೆ ನಾಳೆ ಅವಳು ಮನೆಯಲ್ಲಿಯೇ ಕೂತರೆ ಏನು ಮಾಡೋದು?"

"ನಮಗೆ ಹೇಗೂ ಗಂಡುಮಕ್ಕಳಿಲ್ಲ. ಗೌರಿಯೇ ಗಂಡುಮಗ ಎಂದು ಭಾವಿಸಿಕೊಳ್ಳುವುದು."

"ಈ ಮಾತು ಆಡುವುದಕ್ಕಷ್ಟೇ ಚೆನ್ನ."

"ಸರಿ—ವರದಕ್ಷಿಣೆ ಎಷ್ಟು ಕೊಡಬೇಕಂತೆ?"

" ಬಹಳ ಆಗದ ಹಾಗೆ ತಾವು ನೋಡಿಕೊಳ್ಳುವುದಾಗಿ ಹೇಳಿದರು. "

" ಗೌರಿ ಹಣೆಯಲ್ಲಿ ಏನು ಬರೆದಿದೆಯೋ ದೇವರೇ ಬಲ್ಲ" ಎಂದು ಸ್ನಾನಕ್ಕೆ ಅಣಿಯಾದರು.

ಸುಬ್ಬರಾಯರ ಗಂಟಲಿನಲ್ಲಿ ಅನ್ನ ಇಳಿಯಲಿಲ್ಲ. ಹೆಂಡತಿ ಬಲವಂತಕ್ಕೆ ಎರಡು ತುತ್ತು ನುಂಗಿ ಎದ್ದರು. ಅರ್ಧಗಂಟೆ ವಿಶ್ರಮಿಸಿಕೊಳ್ಳಲೂ ವೇಳೆ ಯಿರಲಿಲ್ಲ. ಕೂಡಲೆ ಅಂಗಿ ರುಮಾಲು ಧರಿಸಿ ಕೈಯಲ್ಲಿ ಒಂದು ಚೀಲ ಹಿಡಿದು ಪೇಟೆಗೆ ಹೊರಟರು

ಪಾತಕ್ಕ ಬರುವ ಹೊತ್ತಿಗೆ ಸಜ್ಜಿಗೆ ಬೋಂಡಕ್ಕೆ ಬೇಕಾಗುವ ಸಾಮಾನುಗಳನ್ನೆಲ್ಲಾ ಒದಗಿಸಿ ರಂಗಮ್ಮ ಗೌರಿಗೆ ಹೆಳಲು ಹಾಕಿದರು. ಸುಬ್ಬರಾಯರು ತಂದ ಸಾಮಾನುಗಳನ್ನು ತಟ್ಟೆಯಲ್ಲಿ ಅಣಿಮಾಡಿದರು. ಗೌರಿಯನ್ನು ಕಳುಹಿಸಿ ಪಕ್ಕದ ಮನೆಯಿಂದ ಕೆಲವು ಬೆಳ್ಳಿತಟ್ಟೆ ಬಟ್ಟಲುಗಳನ್ನು ತರಿಸಿ ಬೀಗರ ಸ್ವಾಗತ ವ್ಯವಸ್ಥೆ ಮಾಡಿದರು.

ಸುಬ್ಬರಾಯರು ತಾವೇ ತೊಟ್ಟಿ ಕಸಗುಡಿಸಿ ನೀರುಹಾಕಿ, ಜಮಖಾನ ಹಾಸಿ, ನಾಲ್ಕು ಊದುಕಡ್ಡಿ ಹಚ್ಚಿಟ್ಟು ಬೀಗರ ದಾರಿ ನೋಡುತ್ತ ನಿಂತರು.

ಗಿರಿಯಪ್ಪ ಒಬ್ಬರೇ ಬರುತ್ತಿರುವುದನ್ನು ಕಂಡು ಸುಬ್ಬರಾಯರ ಎದೆ ಧಸಕ್ಕೆಂದಿತು.

" ಏನು ಶಾನುಭೋಗರೇ ಒಬ್ಬರೇ ಬರುತ್ತಿದ್ದೀರಲ್ಲಾ."

" ಹೆದರಬೇಡ ಮಾರಾಯ. ಅವರೂ ಹೊರಡುವುದರಲ್ಲಿದ್ದರು. ಮುಂಚೆ ಬಂದು ತಿಳಿಸುವ ಎಂದು ನಾನು ಬಂದೆ. ವ್ಯವಸ್ಥೆ ಎಲ್ಲಾ ಆಗಿದೆಯೋ ಇಲ್ಲವೋ ? "

" ತಕ್ಕಮಟ್ಟಿಗೆ ಆಗಿದೆ. ಏನಪ್ಪಾ—ನನ್ನ ದಡ ಮುಟ್ಟಿಸುತ್ತೀರೋ ಇಲ್ಲವೋ ? "

" ಮುಟ್ಟಿಸುವುದಕ್ಕೇ ಅಲ್ಲವೇ ನಾನು ಹೀಗೆ ಅಲೆದಾಡುತ್ತಿರುವುದು."

" ನಿಮಗೆ ಶ್ರಮವೇನೋ ಬಹಳ ಆಗಿದೆ ಗಿರಿಯಪ್ಪ."

" ಕೆಲಸ ಆದರೆ ಶ್ರಮವೆಲ್ಲಾ ಮರೆತುಹೋಗತ್ತೆ."

" ವರದಕ್ಷಿಣೆ ಅಂದರೆ ನಾನೇನು ಮಾಡಲಿ ಗಿರಿಯಪ್ಪ."

"ಆ ವಿಷಯ ನಾನು ನಿಮ್ಮ ಬೀಗಿತ್ತಿ ಸಂಗಡ ಮಾತನಾಡಿದೆ. ಆಕೆ ಪಟ್ಟು ಹಿಡಿದು ಕುಳಿತಿದ್ದಾರೆ. ಹುಡುಗ ಯೋಗ್ಯಾಂತ ಕಾಣತ್ತೆ. ನೋಡೋಣ. ಆದಷ್ಟು ಕಮ್ಮಿ ಮಾಡಿಸೋಣ."

"ಎಷ್ಟು ಕಮ್ಮಿ ಅಂದರೂ ೨-೩ ಸಾವಿರವಾಗಲ್ಲವೇ?"

"ಆಗಬಹುದು."

"ಇನ್ನು ವರೋಪಚಾರ. ಮದುವೆ ಖರ್ಚು. ಮಗಳಿಗೆ ಒಡವೆ ವಸ್ತ್ರ, ಉಡುಗೊರೆ ಇಷ್ಟಕ್ಕೆ ನಾನು ಎಲ್ಲಿಂದ ತರಲಿ ಗಿರಿಯಪ್ಪ."

"ಈಗ ವರನನ್ನು ನೋಡಿ. ಸಂಬಂಧ ನಿಮಗೆ ಒಪ್ಪಿಗೆಯಾದರೆ ಹಣ ನಾನು ಎಲ್ಲಿಂದಾದರೂ ಕೊಡಿಸುತ್ತೇನೆ. ಕೈಗೆ ಬಂದ ತುತ್ತು ಬಾಯಿಗಿಲ್ಲ ಅನ್ನುವ ಹಾಗೆ ಮಾಡಿಕೊಳ್ಳಬೇಡಿ."

"ಸಾಲ ನೀವು ಕೊಡಿಸಿದರೆ ತೀರಿಸುವ ಬಗೆ."

"ಇರೋದು ಯಾವದಾದರೂ ಮಾರಿ ತೀರಿಸಬೇಕು."

"ಏನಿದೆ ಗಿರಿಯಪ್ಪ. ಇರೋದು ಒಂದು ಪಿತ್ರಾರ್ಜಿತ ಗದ್ದೆ. ಅದನ್ನೂ ಮಾರಿಬಿಟ್ಟರೆ ಮುಂದೆ ನನ್ನ ಗತಿ? ಅಕಸ್ಮಾತ್ತಾಗಿ ನಾನು ಕಣ್ಣುಮುಚ್ಚಿಕೊಂಡರೆ ಅವಳು ಭಿಕ್ಷಕ್ಕೆ ಹೋಗಬೇಕಾಗುತ್ತದೆ."

"ಒಳ್ಳೆಯ ಹೊತ್ತಿನಲ್ಲಿ ಕೆಟ್ಟಯೋಚನೆ ಮಾಡಬೇಡಿ ಸುಬ್ಬರಾಯರೇ. ದೇವರ ಮೇಲೆ ಭಾರಹಾಕಿ. ಅವನು ಮಾಡಿಸಿದ ಹಾಗಾಗಲಿ."

ಗಾಡಿಯು ಸಪ್ಪಳವಾಯಿತು. ಬೀಗರ ಪರಿವಾರ ಗಾಡಿಯಿಂದ ಇಳಿದರು. ಗಿರಿಯಪ್ಪನವರು ಉಭಯ ಪರಿಚಯ ಮುಗಿಸಿದ ಮೇಲೆ ಎಲ್ಲರೂ ತೊಟ್ಟಿಯಲ್ಲಿ ಹೋಗಿ ಕುಳಿತರು. ಫಣಿಯಮ್ಮ, ಸುಶೀಲಾ ಇಬ್ಬರನ್ನೂ ರಂಗಮ್ಮ ದೇವರ ಕೋಣೆಗೆ ಕರೆದೊಯ್ದರು.

ಕಾಫಿ ತಿಂಡಿಯ ಹಂಚಿಕೆ ಮುಗಿಯಿತು. ಶ್ರೀನಿವಾಸ ತಾನು ವರನೆಂದು ನಾಚಿ, ಕೊಟ್ಟಿದ್ದ ತಿಂಡಿಯ ಬಹುಭಾಗ ತಟ್ಟೆಯಲ್ಲಿಯೇ ಬಿಟ್ಟ. ಆದರೆ ನರಸಿಂಹಮೂರ್ತಿ ತಟ್ಟೆಯನ್ನು ಬಿಟ್ಟದ್ದೇ ಒಂದು ಉಪಕಾರ.

ಒಳಗೆ ಫಣಿಯಮ್ಮ, ಸುಶೀಲಾ ಅವರ ಮುಂದೆ ತಿಂಡಿ ಇಟ್ಟು ರಂಗಮ್ಮ ಉಪಚಾರಕ್ಕಾರಂಭಿಸಿದರು. ಫಣಿಯಮ್ಮ ಮಡಿಯ ನೆವಹೂಡಿ ತಿಂಡಿ ಬೇಡವೆಂದರು. ರಂಗಮ್ಮ

"ಪಾತಕ್ಕ ಎಲ್ಲಾ ಮಡೀಲೆ ಮಾಡಿದ್ದಾರೇಂದ್ರೆ. ಬಾಯಿಗೆ ಹಾಕಿಕೊಳ್ಳಿ."

"ಇದೇ ಊಟ ಆಯಿತಮ್ಮ."

"ನಿಮಗೆಷ್ಟುಬೇಕೋ ತೆಗೆದುಕೊಳ್ಳಿ."

"ಮನೆಯಲ್ಲಿ ಇವತ್ತು ಶಾಮಿಗೆ ಅಡಿಗೆ. ಏನೂ ಬೇಡಮ್ಮ. ನನ್ನ ಬದಲು ಸುಶೀಲಾ ತೆಗೆದುಕೊಳ್ಳುತ್ತಾಳೆ."

ಅತ್ತೆಯ ಆಜ್ಞೆ ಬಂತೆಂದು ಸುಶೀಲಾ ತಿನ್ನಲಾರಂಭಿಸಿ

"ತೊಗೋಳಿ ಅತ್ತೆ, ಅವರು ಅಷ್ಟೊಂದು ಕೇಳಿಕೊಳ್ಳುತ್ತಾರೆ. ಒಂದು ಸಲ ಬಾಯಿಗೆ ಹಾಕಿಕೊಳ್ಳಿ" ಎಂದಳು.

ಫಣಿಯಮ್ಮ ಸೊಸೆಯ ಕಡೆ ಅವಳನ್ನು ನುಂಗುವಂತೆ ನೋಡಿದರು. ಸುಶೀಲಾ ಇನ್ನು ಉಪಚಾರ ಹೇಳುವುದು ಸರಿಯಲ್ಲ ಎಂದುಕೊಂಡು ಸುಮ್ಮನಾದಳು. ಕೊನೆಗೂ ಫಣಿಯಮ್ಮ ತಿಂಡಿ ಕಾಫಿ ಮುಟ್ಟಲಿಲ್ಲ.

ಗಂಡಸರ ಕಡೆ ಫಲಾಹಾರ ಮುಗಿದಿರಲು ಗಿರಿಯಪ್ಪ ತಾಂಬೂಲದ ತಟ್ಟೆಯನ್ನು ವೆಂಕಟಾಚಲಯ್ಯನ ಮುಂದಿಟ್ಟರು. ತಾಂಬೂಲ ಚರ್ವಣ ಮಾಡುತ್ತಾ ಗಿರಿಯಪ್ಪ

"ಸುಬ್ಬರಾಯರೇ, ಸುಮ್ಮನೇಕೆ ಸಾವಕಾಶ. ಗೌರಿಯನ್ನು ಕರೆಯಿರಿ. ಅವಳ ಮಾವನವರಿಗೆ ನಮಸ್ಕಾರಮಾಡಲಿ" ಎಂದರು.

ಹೊಸ ಸೀರೆಯುಟ್ಟು, ನಸು ನಾಚುತ್ತಾ ನಿಂತಿದ್ದ ಗೌರಿಯನ್ನು ಸುಬ್ಬರಾಯರು ಕರೆತಂದು ವೆಂಕಟಾಚಲಯ್ಯ, ಗಿರಿಯಪ್ಪನವರಿಗೆ ನಮಸ್ಕಾರ ಮಾಡಿಸಿದರು.

ವೆಂಕಟಾಚಲಯ್ಯ ಗೌರಿಯನ್ನು ಹತ್ತಿರ ಕೂಡಿಸಿಕೊಂಡು

"ಸ್ಕೂಲಿಗೆ ಹೋಗುತ್ತಾ ಇದ್ದೀಯಾ ಅಮ್ಮಯ್ಯ" ಎಂದರು.

ಗೌರಿ ಉತ್ತರ ಕೊಡಲಿಲ್ಲ. ಗಿರಿಯಪ್ಪ ಅವಳಿಗೆ ಧೈರ್ಯಕೊಡುವಂತೆ

"ಮಾತಾಡು ತಾಯಿ, ನಾಚಿಕೊಳ್ಳಬೇಡ. ಹೇಳು ನೀನು ಯಾವ ಕ್ಲಾಸು."

"ಫೋರ್ತ್‌ಯಿಯರ್."

"ಸಂಗೀತ ಬರತ್ತ್ಯೇ?"

"ಏನೋ ಅಲ್ಪ ಸ್ವಲ್ಪ" ಎಂದು ಸುಬ್ಬರಾಯರು ಹೇಳಿದರು.

"ಒಂದು ಹಾಡು ಹೇಳು" ಎಂದರು ವೆಂಕಟಾಚಲಯ್ಯ. ಗಿರಿಯಪ್ಪನವರು ಒತ್ತಾಯಮಾಡಿದ ಮೇಲೆ ಗೌರಿ ಒಂದು ದೇವರನಾಮ ಹಾಡಿದಳು. ವೆಂಕಟಾಚಲಯ್ಯ 'ಇನ್ನೊಂದು ಹೇಳು' ಎಂದರು. ಗೌರಿ ಇನ್ನೊಂದು ದೇವರನಾಮ ಹಾಡಿದಳು.

"ಇನ್ನು ಒಳಗೆ ಹೋಗಮ್ಮ"

ಎಂದು ಗಿರಿಯಪ್ಪ ಅಪ್ಪಣೆ ಕೊಟ್ಟಮೇಲೆ ಗೌರಿ ಮತ್ತೆ ವೆಂಕಟಾಚಲಯ್ಯ, ಗಿರಿಯಪ್ಪನವರಿಗೆ ನಮಸ್ಕಾರಮಾಡಿ ಒಳಗೆ ಹೋದಳು.

ಸುಬ್ಬರಾಯರು ಕೈ ಜೋಡಿಸಿ

"ಇದುವರೆಗೆ ಇದು ನಮ್ಮ ಮಗು. ಇನ್ನು ಮೇಲೆ ನಿಮ್ಮ ಮಗು. ಗೌರಿಯನ್ನು ಮಡಲಿಗೆ ಹಾಕಿಕೊಂಡು ಅನುಗ್ರಹಿಸಬೇಕು" ಎಂದರು.

"ಎಲ್ಲಾ ದೈವಚಿತ್ತ ಸುಬ್ಬರಾಯರೇ. ಋಣಾನುಬಂಧ ಇದ್ದರೆ ತಪ್ಪಿಸುವುದಕ್ಕೆ ಯಾರಿಂದ ಸಾಧ್ಯ."

"ಇನ್ನು ಲಗ್ನಕ್ಕೆ ತಾರೀಖು ಹುಡುಕಬಹುದಷ್ಟೇ?"

ಎಂದರು ಗಿರಿಯಪ್ಪ. ವೆಂಕಟಾಚಲಯ್ಯ ಮೆಲ್ಲನೆ ಗಡ್ಡ ಕಿತ್ತುಕೊಳ್ಳುತ್ತಾ,

"ಅವಳನ್ನು ಒಂದು ಮಾತು ಕೇಳಿ ನಿಶ್ಚಯಿಸಬೇಕು."

"ಅವಶ್ಯಕವಾಗಿ"

ಎಂದು ಗಿರಿಯಪ್ಪ ಕೂತಲ್ಲಿಂದಲೇ

"ಅಮ್ಮಾ ಫಣಿಯಮ್ಮನವರೇ. ಸ್ವಲ್ಪ ಹೀಗೆ ಬನ್ನಿ"

ಎಂದು ಕೂಗಿದರು. ಫಣಿಯಮ್ಮ ಬಂದು ತೊಟ್ಟಿಯಬಾಗಿಲು ಬಳಿ ನಿಂತರು.

"ಸೊಸೆಯನ್ನು ನೋಡಿದಿರಾ?"

"ನೋಡಿದೆ."

"ಏನು ನಿಶ್ಚಯಿಸಿದಿರಿ ಎಂದು ಯಜಮಾನರು ಕೇಳುತ್ತಾರೆ."

"ನಮ್ಮದೇನಪ್ಪಾ. ಅವರು ಹೇಗೆ ಹೇಳಿದರೆ ಹಾಗೆ."

" ಹಾಗೆಂದರೆ ಆಗತ್ತ್ಯೇನಮ್ಮ. ನಾಳೆ ಸೊಸೆ ಕಷ್ಟ ಸುಖ ನಿಮಗೆ ತಾನೆ ಸೇರಿದ್ದು. "

" ಸೀನೂ ಈಗಲೇ ಮದುವೆ ಬೇಡಾಂತಿದ್ದ ವಿಷಯ ನಿಮಗೆ ತಿಳಿಸಿದ್ದೆ ವಲ್ಲಾ ಗಿರಿಯಪ್ಪನೋರೇ. "

" ಅದಿರಲಿ. ಮದುವೆಯಾಗೋ ತನಕ ಹುಡುಗರೆಲ್ಲಾ ಹಾಗೆ ಹೇಳುತ್ತಿರುವುದು ವಾಡಿಕೆ. ನಿಮ್ಮ ಅಭಿಪ್ರಾಯವೇನು ? "

" ಏನೂ ಇಲ್ಲ. ಸೀನೂ ಲಾ ಪ್ಯಾಸುಮಾಡಿ ಬಂದಮೇಲೆ ಮದುವೆ ಯೋಚನೆ ಇಟ್ಟುಕೊಂಡಿದ್ದೆವು. "

" ಮದುವೆಯಾದ ಕೂಡಲೆ ಓದುವುದನ್ನು ಬಿಡು ಎಂದು ಯಾರೂ ಹೇಳುವುದಿಲ್ಲ. ಅವನು ಮಹಾರಾಯನ ಹಾಗೆ ಲಾ ಪರೀಕ್ಷೆಗೆ ಓದಲಿ. "

" ಓದಿಸುವವರು ಒಬ್ಬರಾಗಬೇಕಲ್ಲಾ. "

ಎಂದು ಫಣಿಯಮ್ಮ ಚರ್ಚೆಯ ಮುಖ್ಯ ವಿಷಯವನ್ನೆತ್ತಿದರು. ಗಿರಿಯಪ್ಪ ಮಾತುಕತೆ ಬಹಳ ಸೂಕ್ಷ್ಮವಾದುದನ್ನು ಕಂಡು

" ಇರೋ ವಿಷಯ ಸ್ಪಷ್ಟವಾಗಿ ಹೇಳಿಬಿಡಲೇ ವೆಂಕಟಾಚಲಯ್ಯನೋರೇ ; ಸುಮ್ಮನೆ ಆಮೇಲೆ ಮುಜುಗರಬೇಡ."

" ಹೇಳಿ ಗಿರಿಯಪ್ಪ."

" ನೋಡಿ ಸುಬ್ಬರಾಯರೇ. ಸೀನೂ ಲಾ ಪರೀಕ್ಷೆಗೆ ಹೋಗಲೇ ಬೇಕೂಂತ ಹಟ ಹಿಡಿದಿದ್ದಾನೆ. ವೆಂಕಟಾಚಲಯ್ಯನವರು ಬೇಡವೆನ್ನುತ್ತಿದ್ದಾರೆ. ಅವನನ್ನು ಮುಂದಕ್ಕೆ ಓದಿಸುವ ಭಾರ ಹೆಣ್ಣು ಕೊಡುವ ಮಾವನಿಗೆ ಸೇರಿದ್ದೂಂತ ವೆಂಕಟಾಚಲಯ್ಯ ನಿರ್ಧರಿಸಿದ್ದಾರೆ. ನೀವು ಆ ಜವಾಬ್ದಾರಿ ಹೊರಲು ಸಾಧ್ಯವೇ ? "

ಈ ಪ್ರಶ್ನೆಗೆ ಏನು ಉತ್ತರ ಕೊಡಬೇಕೆಂದು ಸುಬ್ಬರಾಯರಿಗೆ ಗೊತ್ತಾಗಲಿಲ್ಲ. ಶೂನ್ಯದೃಷ್ಟಿಯಿಂದ ಮನೆಯ ಸೂರನ್ನು ನೋಡತೊಡಗಿದರು. ವೆಂಕಟಾಚಲಯ್ಯ

" ನಿಧಾನವಾಗಿ ಅವರು ಯೋಚನೆಮಾಡಿ ತಿಳಿಸಲಿ ಗಿರಿಯಪ್ಪನವರೇ, ಈಗಲೇ ಏನು ಅವಸರ."

ಎಂದು ಸಮಸ್ಯೆಯನ್ನು ಪರಿಹಾರಮಾಡಿ ಹೊರಡಲು ಸಿದ್ಧರಾದರು.

೭

ಗಿರಿಯಪ್ಪನವರ ಸಂಧಾನ ಮುರಿದುಬೀಳುವ ಪರಿಸ್ಥಿತಿಯೊದಗಿತು. ವರದಕ್ಷಿಣೆ ತೆಗೆದುಕೊಳ್ಳದೆ ಲಗ್ನಕ್ಕೆ ಒಪ್ಪಿಗೆಕೊಟ್ಟರೆ ತಮ್ಮ ಹಾಗೂ ವಂಶದ ಗೌರವಕ್ಕೇ ಧಕ್ಕೇ ಬರುತ್ತದೆಂದು ಫಣಿಯಮ್ಮ ಹಟ ಹಿಡಿದಿದ್ದರು. ನರಸಿಂಹಮೂರ್ತಿ ತನ್ನ ಲಗ್ನದಲ್ಲಿಯೂ ವರದಕ್ಷಿಣೆ ಮುಟ್ಟಿದ್ದುದರಿಂದ ತಮ್ಮನ ಮದುವೆ ಹಾಗೇ ಆಗುವುದಕ್ಕೆ ಕಟುವಿರೋಧಿಯಾಗಿದ್ದ.

ಸೀನೂ ಮದುವೆಯಲ್ಲಿ ವರದಕ್ಷಿಣೆ ಬಂದೇ ತೀರಬೇಕೆಂದು ನರಸಿಂಹಮೂರ್ತಿ ಹಟ ಹಿಡಿಯುವುದಕ್ಕೆ ಇನ್ನೂ ಒಂದು ಕಾರಣವಿತ್ತು. ನರಸಿಂಹಮೂರ್ತಿಗೆ ಬಂದ ವರದಕ್ಷಿಣೆ ಹಣದ ಸ್ವಲ್ಪಭಾಗ ಸೀನೂ ವಿದ್ಯಾಭ್ಯಾಸಕ್ಕೆ ಖರ್ಚಾಗಿತ್ತು. ಈಗ ಸೀನೂ ವರದಕ್ಷಿಣೆ ತೆಗೆದುಕೊಂಡು ಆ ಹಣ ತುಂಬಿಕೊಡಲಿ ಎಂದು ಅವನ ವಾದ.

ವರದಕ್ಷಿಣೆಯ ಗೋಜಿಲ್ಲದಂತೆ ಈ ಲಗ್ನ ಕೂಡಿಸಬೇಕೆಂದು ಗಿರಿಯಪ್ಪ ಮಾಡಿದ ಪ್ರಯತ್ನ ನಿಸ್ಸಾರ್ಥಕವಾಯಿತು. ಮೂರುಸಾವಿರ ರೂಪಾಯಿಗೆ ಚಿಕ್ಕಾಸು ಕಡಿಮೆಯಾದರೂ ತಮಗೆ ಈ ಸಂಬಂಧವೇ ಬೇಕಿಲ್ಲವೆಂದು ವೆಂಕಟಾಚಲಯ್ಯ, ಫಣಿಯಮ್ಮ, ನರಸಿಂಹಮೂರ್ತಿ ತಮ್ಮ ಕೊನೆಯ ನಿರ್ಧಾರ ತಿಳಿಸಿಬಿಟ್ಟರು.

ಗಿರಿಯಪ್ಪ ತಂದ ಸುದ್ದಿ ಕೇಳಿ ಸುಬ್ಬರಾಯರು ಭೂಮಿಗಿಳಿದು ಹೋದರು. ಈ ಸಂಬಂಧ ತಮ್ಮ ಯೋಗ್ಯತೆ ಮೀರಿದುದೆಂದು ಅವರು ನಿರ್ಧರಿಸಿದರು. ಒಂದು ದಿನ ರಂಗಮ್ಮ ಗಿರಿಯಪ್ಪನವರ ಹತ್ತಿರ ಮಾತು ತೆಗೆದು ಕೇಳಿದರು.

"ನಮ್ಮ ಗದ್ದೆಗೆ ಎಷ್ಟು ಕೊಡಿಸುತ್ತೀರಾ ಗಿರಿಯಪ್ಪನವರೇ ?"

"ಈಗಿನ ಧಾರಣೆಯಲ್ಲಿ ೩–೩॥ ಸಾವಿರ ಧಾರಾಳವಾಗಿ ಬರುತ್ತದಮ್ಮ."

"ವ್ಯಾಪಾರ ಕುದುರಿಸಿಬಿಡಿ."

"ನಿಮ್ಮ ಯಜಮಾನರು ಅದಕ್ಕೆ ಬಡಪೆಟ್ಟಿಗೆ ಒಪ್ಪುವ ಹಾಗಿಲ್ಲವಲ್ಲಮ್ಮ."

"ಅವರನ್ನು ಒಪ್ಪಿಸುವ ಭಾರ ನನಗೆ ಬಿಡಿ."

"ಇರುವುದೊಂದು ಚೂರು ಭೂಮಿ. ಅದನ್ನೂ ಕೊಟ್ಟುಬಿಟ್ಟರೆ ಮುಂದೆ........"

"ಗೌರಿ ಚೆನ್ನಾಗಿದ್ದರೆ ನಮ್ಮ ಪಾಡು ಹೇಗೋ ಕಳೆದುಹೋಗತ್ತೆ ಶಾನುಭೋಗರೇ—ಹುಟ್ಟಿಸಿದ ದೇವರು ಹುಲ್ಲು ಮೇಯಿಸುತ್ತಾನೆಯೇ?"

"ನೀವು ಇನ್ನೂ ಒಂದು ಸಲ ಯೋಚನೆಮಾಡಿ ರಾಯರೇ."

"ಬೇಕಾದಷ್ಟು ಯೋಚನೆಮಾಡಿದ್ದೇನೆ ಶಾನುಭೋಗರೇ. ಗೌರೀಗೆ ವಯಸ್ಸಾಗುತ್ತಿದೆ. ಹೆಣ್ಣು ಮಕ್ಕಳು ವಯಸ್ಸಿಗೆ ಬಂದಮೇಲೆ ಹೇಗೆ ಬೆಳೆಯುತ್ತಾರೆ ನಿಮಗೆ ಗೊತ್ತೇ ಇದೆ. ನೀವು ದಯುಪಿಟ್ಟು ಬೀಗರನ್ನೊಪ್ಪಿಸಿ, ಈ ಗದ್ದೆ ಖರೀದಿ ಮಾಡಿಸಿಬಿಡಿ. ನಿಮ್ಮ ಆಶೀರ್ವಾದದಿಂದ ಈ ಶ್ರಾವಣ ಮಾಸದಲ್ಲಿ ಮದುವೆ ಮುಗಿದುಹೋಗಲಿ."

"ನಿಮ್ಮ ಇಷ್ಟ"

ಎಂದು ಹೇಳಿಹೋದರು. ಸುಬ್ಬರಾಯರು ಮನೆಗೆ ಬರುತ್ತಲು ರಂಗಮ್ಮ ತಮ್ಮ ನಿರ್ಧಾರವನ್ನು ತಿಳಿಸಿದರು. ಅವರು ಸ್ವಲ್ಪಹೊತ್ತು ಯೋಚಿಸಿ

"ನಿನ್ನ ಇಷ್ಟ" ಎಂದರು.

ಗೌರಿ ಮದುವೆ ನಿಶ್ಚಯಿಸಿದ ವೇಳೆ ಒಳ್ಳೆಯದಾಗಿತ್ತು. ಅವಳ ಪುಣ್ಯ ದಿಂದ ಸೀತಮ್ಮ ಆಸ್ಪತ್ರೆ ಬಿಟ್ಟು ಮನೆಗೆ ಬಂದಿದ್ದಳು. ಜ್ವರ ನಿಂತಿತ್ತು. ಆದರೆ ನಿಶ್ಶಕ್ತಿ ಮೊದಲಿನಂತೆಯೇ. ಹೇಗಾದರೂ ಮಾಡಿ ಲಗ್ನಕ್ಕೆ ಮಗ ಳನ್ನೂ ಅವಳ ಮಾವನ ಮನೆಯುವರನ್ನೂ ಬರಮಾಡಿಕೊಳ್ಳಬೇಕೆಂಬ ಸುಬ್ಬ ರಾಯರ ಪ್ರಯತ್ನ ಫಲಿಸಲಿಲ್ಲ. ಗೌರಿ ಗಂಡನಿಗೆ ಮೂರುಸಾವಿರ ವರದಕ್ಷಿಣೆ ಕೊಡಲು ಸುಬ್ಬರಾಯರು ಒಪ್ಪಿದಾರೆಂದು ತಿಳಿದಮೇಲಂತೂ ನಾಗಪ್ಪ, ಕೇಶವಯ್ಯ ಕೆಂಡಕೆಂಡವಾದರು. ಕೇಶವಯ್ಯ ಹೆಂಡತಿಯು ಮುಂದೆ ಹಾರಾಡಿದ. ಅವಳ ಅಪ್ಪ ಅಮ್ಮನನ್ನು ಮನಸ್ಸಿಗೇ ನಿಂದಿಸಿದ. ಸೀತಮ್ಮ ಎಲ್ಲವನ್ನೂ ಕೇಳಿದಳು, ಸಹಿಸಿದಳು, ಮುಖಮುಚ್ಚಿಕೊಂಡು ಕಣ್ಣೀರಿಟ್ಟಳು. ಅವಳಿಗೆ ಬಾಳು ದೊಡ್ಡ ಹೊರೆಯಾಗಿತ್ತು. ಯಮ ಅವಳ ಆರಾಧ್ಯಮೂರ್ತಿ ಯಾಗಿದ್ದ. ಆದರೆ ಅವನಿಗಿನ್ನೂ ಕರುಣೆ ಹುಟ್ಟಿರಲಿಲ್ಲ.

ಹಿರಿಯ ಮಗಳು ಲಗ್ನಕ್ಕೆ ಬರುವುದು ಸಾಧ್ಯವಿಲ್ಲವೆಂದು ತಿಳಿದ ಮೇಲೆ ರಂಗಮ್ಮ ಮನಸ್ಸನ್ನು ಕಲ್ಲುಮಾಡಿಕೊಂಡರು. ಜಗತ್ತಿನ ಕಠೋರ ವೃತ್ತಿಯನ್ನು ಕಂಡು ಸಹಜ ಕೋಮಲವಾದ ಅವರ ಹೃದಯ ತಪ್ತ ಜ್ವಾಲಾಮುಖಿಯಾಗಿತ್ತು. ಅದನ್ನು ದಮನಿಸುವುದರಲ್ಲಿ ಅವರ ಸರ್ವಶಕ್ತಿ ವಿನಿಯೋಗವಾಗಿ ಹೋಗಿತ್ತು.

೮

ಮದುವೆ ವ್ಯವಸ್ಥೆಯಲ್ಲಾ ಗಿರಿಯಪ್ಪನವರಿಗೇ ಗಂಟು ಬಿತ್ತು. ಇಬ್ಬರ ಕಡೆಗೂ ಅವರು ಬೇಕಾಗಿದ್ದವರೆಂದು ಎಲ್ಲರೂ ಅವರನ್ನು ಕಾಡುವವರೇ ಆದರು. ಎಷ್ಟೋ ಪ್ರಸಂಗಗಳಲ್ಲಿ ಗಿರಿಯಪ್ಪ ಸಹನೆ ಕಳೆದುಕೊಂಡು ಹೇಳವೆ ಕೇಳದೆ ಕಂಬಿ ಕೀಳಬೇಕಾಗುತ್ತಿತ್ತು. ಆದರೆ ಲೋಕ ಕಂಡ ಮನುಷ್ಯ ಹಿಡಿದ ಕೆಲಸ ಸಾಧಿಸದೆ ಬಿಟ್ಟರೆ ನಾಳೆ ನೋಡಿದವರು ತನ್ನನ್ನು 'ಮುಠ್ಠಾಳ' ಅಂದಾರಲ್ಲ ಎನ್ನುವ ಭಯ.

ಬೀಗರನ್ನೆದುರುಗೊಂಡು ವರಪೂಜೆಗೆ ಕರೆದು ತಂದ ಸಂಜೆ ಒಂದು ಸಣ್ಣ ಪ್ರಸಂಗ ನಡೆಯಿತು. ಮೆರವಣಿಗೆಗೆ ಸುಬ್ಬರಾಯರು ಯಾರದೋ ಕಾಲು ಕಟ್ಟಿ ಒಂದು ವಿಕ್ಟೋರಿಯಾ ತಂದಿದ್ದರು. ಮೋಟಾರು ಬಂದ ಹೊರತೂ ತಾವು ಹೊರಡುವುದಿಲ್ಲವೆಂದು ಬೀಗರು ಹಟ ಹಿಡಿದರು. ಸುಬ್ಬರಾಯರು ಬೀಗರ ಕಾಲಿಗೆ ಬಿದ್ದು ತಮ್ಮ ತಪ್ಪನ್ನೊಪ್ಪಿಕೊಂಡು 'ನಾಗವಲ್ಲಿ' ಮೆರವಣಿಗೆಯ ದಿನ ಖಂಡಿತ ಕಾರು ತರುತ್ತೇನೆ ಎಂದು ಆಶ್ವಾಸನ ಕೊಟ್ಟ ಮೇಲೆ ಕೆಲಸ ಸುಗಮವಾಯಿತು.

ಹೆಣ್ಣು ಪಾಳ್ಯದಲ್ಲಿ ಆಗಿಂದಾಗ್ಗೆ ಸಣ್ಣಪುಟ್ಟ ವಿಷಯಗಳಲ್ಲಿ ಗೊಂದಲ ವೇಳುತ್ತಿತ್ತು. ರಂಗಮ್ಮ ತಮ್ಮ ಬುದ್ಧಿಯನ್ನೆಲ್ಲಾ ವ್ಯಯ ಮಾಡಿ ಪರಿಸ್ಥಿತಿಯನ್ನು ಹತೋಟಿಗೆ ತರುತ್ತಿದ್ದರು. ಯಾವ ಕಾರಣಕ್ಕೂ ಬೀಗರ ಮನೆಯವರು ಅಸಮಾಧಾನಗೊಳ್ಳಬಾರದೆಂದು ರಂಗಮ್ಮ ಸರ್ವಸಾಹಸ ಮಾಡುತ್ತಿದ್ದರು. ಬೀಗರ ಮನೆಯವರು ಯಾರು ಎಷ್ಟೇ ಹೊತ್ತಿನಲ್ಲಿ ಬಂದರೂ ಒಂದು ಕಪ್ ಕಾಫಿ ಹಿಡಿದು ನಿಂತಿರಬೇಕೆಂದು ಸುಬ್ಬರಾಯರು ತಮ್ಮ ಜನಕ್ಕೆ ತಿಳಿಸಿದ್ದರು. ಬೀಗರು ಮದುವೆಯ ಬಗ್ಗೆ ಮುಂದೆ ಏನು ಆಕ್ಷೇಪಣೆ

ಯೆತ್ತಿದರೂ 'ಸುಬ್ಬರಾಯ, ಒಂದು ಕಪ್ ಕಾಫಿ ಕೊಡಲಿಲ್ಲ' ಎನ್ನುವ ಅಪಖ್ಯಾತಿ ಬೇಡ ಎಂದು ಅವರ ಹಟ.

ಲಗ್ನದ ದಿವಸ 'ಮಾಂಗಲ್ಯಧಾರಣ'ಕ್ಕೆ ಮುಂಚೆ ಆಗಬೇಕಾದ ಶಾಸ್ತ್ರಗಳೆಲ್ಲಾ ವಿಧ್ಯುಕ್ತವಾಗಿ ನಡೆಯುತ್ತಿದ್ದುವು. ಪುರೋಹಿತರು ಆಜ್ಞಾಪಿಸಿದರು.

"ಇನ್ನು ಹೆಣ್ಣನ್ನು ಬರಮಾಡಿ"

ಹೆಣ್ಣು ಗೌರಿಪೂಜೆಗೆ ಕುಳಿತಿತ್ತು. ಸೋದರಮಾವ ಹೆಣ್ಣನ್ನು ಕರೆದುಕೊಂಡು ಬರಬೇಕಾದುದು ಪದ್ಧತಿ. ಆದರೆ ಹೆಣ್ಣಿಗೆ ಸೋದರಮಾವ ನಿರಲಿಲ್ಲ. ಸುಬ್ಬರಾಯರ ಸಮೀಪದ ಬಂಧುಗಳೊಬ್ಬರು ಹೆಣ್ಣನ್ನು ಕರೆ ತರಲು ಹೊರಟರು.

ಹಸೆಯ ಮೇಲೆ ಕುಳಿತಿದ್ದ ವೆಂಕಟಾಚಲಯ್ಯ ಮೆಲ್ಲನೆ ಗಿರಿಯಪ್ಪನನ್ನು ಕರೆದು ಪಿಸಪಿಸ ಮಾತನಾಡಿದರು. ಅವರ ಮಾತು ಕೇಳಿ ಗಿರಿಯಪ್ಪ ಸಂತೋಷಪಟ್ಟ ಹಾಗೆ ಕಾಣಲಿಲ್ಲ. ಅವರ ಮುಖ ಗಂಟಿಕ್ಕಿತು. ಪುರೋಹಿತರನ್ನು ನೋಡಿ

"ಸ್ವಲ್ಪ ತಡೀರಿ ಉಪಾದ್ರೆ."

"ಲಗ್ನಕ್ಕೆ ವೇಳೆ ಮೀರಿ ಹೋಗುತ್ತದಲ್ಲಾ ಸ್ವಾಮಿ."

"ಏನೂ ಇಲ್ಲ—ಸ್ವಲ್ಪ ತಡೀರಿ" ಎಂದು ಹೇಳಿ ಸುಬ್ಬರಾಯರು, ವೆಂಕಟಾಚಲಯ್ಯ ಇಬ್ಬರನ್ನೂ ಕರೆದುಕೊಂಡು ಒಂದು ರೂಮು ಸೇರಿ ಬಾಗಿಲು ಹಾಕಿದರು.

"ಏಕೆ ಗಿರಿಯಪ್ಪ—ಏನು ಆಗಬೇಕಾಗಿತ್ತು?"

"ನಿಮ್ಮ ಬೀಗರನ್ನೇ ಕೇಳಿ ಸುಬ್ಬರಾಯರೇ."

"ನನ್ನ ಕೇಳುವುದೇನು—ನೀವೇ ಹೇಳಿಬಿಡಿ ಗಿರಿಯಪ್ಪ" ಎಂದು ವೆಂಕಟಾಚಲಯ್ಯ ಹೇಳಿದರು.

"ಏನೂ ಅಂದರೆ—ವರದಕ್ಷಿಣೆ ಹಣ ಕೈಗೆ ಬಂದ ಹೊರತೂ ಮುಂದಿನ ಕಲಾಪ ಸಾಧ್ಯವಿಲ್ಲ ಎಂದು ವೆಂಕಟಾಚಲಯ್ಯನವರು ತಿಳಿಸುತ್ತಾರೆ."

"ಹಣಕ್ಕೆ ಮೋಸವೆಲ್ಲಿಂದ ಬಂತು ಸ್ವಾಮಿ. ಮಾತಾಡಿದ್ದಾಯಿತು.

ಅದರಂತೆ ಕೊಡಬೇಕಾದುದು ನಮ್ಮ ಕರ್ತವ್ಯ. ನಮ್ಮ ಮೇಲೆ ಅಷ್ಟು ಅಪನಂಬಿಕೆಯೇ?"

"ಅಪನಂಬಿಕೆ ಪ್ರಶ್ನೆಯಲ್ಲ ಸುಬ್ಬರಾಯರೇ. ವ್ಯವಹಾರ ಯಾವಾಗಲು ಖಚಿತವಾಗಿರಬೇಕು. ಧಾರೆ ಮೊದಲಿರುವ ಉತ್ಸಾಹ ಕೆಲವರಿಗೆ ಧಾರೆಯಾದ ನಂತರ ಇರುವುದಿಲ್ಲ."

"ನನ್ನ ಹಾಗೆ ಭಾವಿಸಬೇಡಿ—ನಿಮ್ಮ ದಮ್ಮಯ್ಯ—ಲಗ್ನಕ್ಕೆ ಹೊತ್ತು ಮೀರುತ್ತಿದೆ. ನಿಮ್ಮ ಹಣ ತಂದು ನಿಮ್ಮ ಮನೆ ಬಾಗಿಲಿಗೆ ಒಪ್ಪಿಸುತ್ತೇನೆ" ಎಂದು ಸುಬ್ಬರಾಯರು ಅಂಗಲಾಚಿದರು. ವೆಂಕಟಾಚಲಯ್ಯ ಕುಳಿತ ಜಾಗದಿಂದ ಜಪ್ಪಯ್ಯ ಎನ್ನಲಿಲ್ಲ.

"ಏನು ಮಾಡೂಂತೀರಿ ಗಿರಿಯಪ್ಪನವರೇ?"

ಇಷ್ಟು ಹೊತ್ತಿಗೆ ಸುಬ್ಬರಾಯರ ಸ್ಥೈರ್ಯ ಮುಗಿದು ಕಣ್ಣಲ್ಲಿ ನೀರು ಬರಲಾರಂಭವಾಗಿತ್ತು.

"ಸುಬ್ಬರಾಯರೇ ಕಣ್ಣಲ್ಲೇಕೆ ನೀರು ಹಾಕುತ್ತೀರಿ. ನಾನು ಬೇಕಾದರೆ ಪ್ರಾಮಿಸರಿ ಬರೆದುಕೊಡುತ್ತೇನೆ."

"ಅದು ಹೇಗಾಗುತ್ತೆ ಗಿರಿಯಪ್ಪ" ಎಂದು ವೆಂಕಟಾಚಲಯ್ಯ ಅಡ್ಡ ಮಾತಾಡಿದರು. ಕ್ಷಣಕಾಲ ಯಾರಿಗೂ ಏನು ಮಾಡಬೇಕೆಂದು ಬುದ್ಧಿಗೆ ತೋಚಲಿಲ್ಲ. ಗಿರಿಯಪ್ಪ ಒಂದು ಚಿಟಿಕೆ ನಶ್ಯ ಮೂಗಿಗೇರಿಸಿ

"ನನಗೆ ಹತ್ತು ನಿಮಿಷ ಅವಕಾಶ ಕೊಡಿ ಬಂದುಬಿಡುತ್ತೇನೆ"

ಎಂದು ಹೇಳಿ ಅಲ್ಲಿಂದ ಹಾರಿದರು. ಸುಬ್ಬರಾಯರು ತಲೆಯ ಮೇಲೆ ಕೈ ಹೊತ್ತು ಕುಳಿತುಬಿಟ್ಟರು. ಕಲ್ಯಾಣ ಮಂಟಪದಲ್ಲಿ ಗುಜಗುಜ ಆರಂಭವಾಯಿತು. ಪುರೋಹಿತರು ಇನ್ನು ಅವಸರ ಪಡಿಸಿದರೆ ಸುಖವಿಲ್ಲವೆಂದು ಸಪ್ಪೆಮೋರೆ ಹಾಕಿಕೊಂಡು ನಿಂತುಬಿಟ್ಟರು. ಒಂದೇ ಗಳಿಗೆಯಲ್ಲಿ ನಗುನಗುತ್ತಿದ್ದ ಕಲ್ಯಾಣಮಂಟಪ ದುಃಖದ ತೆರೆಯನ್ನು ಧರಿಸಿತು.

ಸುಬ್ಬರಾಯರು ಯೋಚನೆಗೊಳಗಾದರು. ಸಭಾ ಮಂಟಪದಲ್ಲಾಗಿದ್ದ ಆಭಾಸ ಹೊರಬಿದ್ದರೆ ತಮ್ಮ ಗೌರವ ಎಳ್ಳಷ್ಟೂ ಉಳಿಯುವುದಿಲ್ಲವೆಂದು ಅವರು ನಂಬಿದರು. ಗಿರಿಯಪ್ಪ ಎಷ್ಟು ಹೊತ್ತಿಗೆ ಬರುತ್ತಾರೆಯೋ—ಅವರು ಹೋದ ಕೆಲಸ ಆಗುತ್ತದೆಯೋ ಇಲ್ಲವೋ ಎಂಬ ಆತಂಕ ಬೇರೆ. ನಿಮಿಷ

ಉರುಳಿದಂತೆ ಸುಬ್ಬರಾಯರಿಗೆ ಮುಪ್ಪಡರುತ್ತಿತ್ತು. ಗಿರಿಯಪ್ಪನನ್ನು ನಿರೀಕ್ಷಿಸಿಕೊಂಡು ರಸ್ತೆಯಲ್ಲಿ ನಿಂತರು.

ಗಿರಿಯಪ್ಪ ಒಂದು ಜಟಕಾದಲ್ಲಿ ಕುಳಿತು ಅದನ್ನು ನಾಗಾಲೋಟ ದಲ್ಲಿ ಬಿಡಿಸಿಕೊಂಡು ಬರುತ್ತಿದ್ದುದನ್ನು ಕಂಡು ಹೋದ ಜೀವ ಬಂದಂತಾ ಯಿತು. ಆದರೂ ಅನುಮಾನ, ಅವರು ವಿಫಲರಾಗಿ ಬಂದರೇನು ಗತಿ?

ಏನೂ ಗತಿಯಿಲ್ಲ. ಮದುವೆ ಏನಾದರೂ ನಿಂತುಹೋದರೆ ಹೆಂಡತಿ, ಮಗಳನ್ನು ಕಟ್ಟಿಕೊಂಡು, ಕೆರೆ ಹಾರಿಕೊಳ್ಳುವುದೆಂದು ಸುಬ್ಬರಾಯರು ಮನಸ್ಸಿನಲ್ಲಿಯೇ ನಿರ್ಧರಿಸಿಕೊಂಡರು.

ಗಿರಿಯಪ್ಪ ಗಾಡಿಯಿಂದ ಧುಮುಕಿ "ಗೆದ್ದಿರಿ ಸುಬ್ಬರಾಯರೇ, ನಿಮ್ಮ ಅದೃಷ್ಟ ಒಳ್ಳೆಯದು"

ಎಂದು ಹೇಳಿದಾಗಲೇ ಸುಬ್ಬರಾಯರು ನಿರಾತಂಕವಾಗಿ ಉಸಿರಾಡಿ ದುದು.

ತಾವು ತಂದಿದ್ದ ೩೦೦೦ ರೂಗಳ 'ಮೈಸೂರು ಬ್ಯಾಂಕ್' ಚೆಕ್ಕನ್ನು ವೆಂಕಟಾಚಲಯ್ಯನ ಕೈಗಿತ್ತು.

"ಇದು ನಡೆಯುತ್ತದೆ ತಾನೆ ವೆಂಕಟಾಚಲಯ್ಯ. ಎಲ್ಲಾ ನೋಟು ಗಳೇ ಬೇಕಾಗಿದ್ದವೋ?'

"ಏನಾದರೆ ಏನು?—ಚೆಕ್ಕು ಯಾರದು?

"ನಮ್ಮ ಲಾಯರು ಶ್ರೀನಿವಾಸರಾಯರದು. ಅವರು ಸುಳ್ಳು ಚೆಕ್ಕು ಕೊಡುವವರಲ್ಲ."

"ತುಂಬ ದೊಡ್ಡ ಲಾಯರು—ದೊಡ್ಡ ಮನುಷ್ಯ."

"ಇನ್ನಾದರೂ ಹಸೆಯ ಮೇಲೆ ದಯಮಾಡಿಸುತ್ತೀರಾ?"

"ಆಗಬಹುದು."

ಎಂದು ವೆಂಕಟಾಚಲಯ್ಯ ಎದ್ದರು. ಗಿರಿಯಪ್ಪನಿಗೆ ಅವರನ್ನು ನುಂಗಿ ಬಿಡುವಷ್ಟು ಕೋಪ. ಆದರೆ ತಮ್ಮ ಕೋಪ ಬಡ ಸುಬ್ಬರಾಯರಿಗೆ ವಕ್ರವಾಗಬಾರದೆಂದು ಸಹಿಸಿಕೊಂಡರು.

ಮುಂದಿನ ಕೆಲಸಕಾರ್ಯಗಳು ಸಾಂಗವಾಗಿ ನಡೆದವು. ಲಗ್ನದ ಮುಹೂರ್ತ ಮೀರಿತೆಂದು ಪುರೋಹಿತರು ಚಡಪಡಿಸಿದರು. ಅವರ ಕೈಗೆ

ಇನ್ನೆರಡು ರೂಪಾಯಿ ದಕ್ಷಿಣೆಯಿಟ್ಟು "ಆ ಸುದ್ದಿ ತೆಗಿಯಬೇಡಿ" ಎಂದು ಗಿರಿಯಪ್ಪ ಎಚ್ಚರಿಕೆ ಕೊಟ್ಟರು.

ಐದು ದಿವಸ ಸಾಂಗವಾಗಿ ಮದುವೆ ನಡೆಯಿತು. ಯಾವದು ಕಡಿಮೆ ಯಾಗುವುದಕ್ಕೂ ವೆಂಕಟಾಚಲಯ್ಯ ಅವಕಾಶ ಕೊಡಲಿಲ್ಲ. ನಾಗವಲ್ಲಿ ಮೆರವಣಿಗೆ ಬೀಗರ ಇಚ್ಛೆಯಂತೆ ಮೋಟಾರುಕಾರಿನಲ್ಲೇ ಆಯಿತು.

ಮೆರವಣಿಗೆ ಹೊರಡುವ ಮುನ್ನ ಹೊಸ ಸೂಟು ಹಾಕಿಕೊಂಡು ಸುಸಜ್ಜಿತನಾಗುತ್ತಿದ್ದ ಮಗನನ್ನು ಫಣಿಯಮ್ಮ ನೋಡಿದರು.

"ಮನ್ಮಥ ಇದ್ದ ಹಾಗಿದ್ದೀ ನೀನೂ. ನಿನ್ನ ಕೈಹಿಡಿಯುವುದಕ್ಕೆ ಗೌರಿ ಪುಣ್ಯ ಮಾಡಿದ್ದಳು."

"ಗಡಿಯಾರ ಎಲ್ಲಿ ಸೀನೂ."

"ಯಾವ ಗಡಿಯಾರಾಮ್ಮಾ."

"ಇದೇನೋ ಹೀಗೆ ಕೇಳುತ್ತೀ. ಸೂಟಿನ ಜತೆ ಗಡಿಯಾರ, ಚೈನು ಕೊಡಬೇಕೆಂದು ನಾವು ಹೇಳಿರಲಿಲ್ಲವೇ?"

"ಹೌದಮ್ಮ. ನಾನೂ ಮರೆತುಬಿಟ್ಟಿದ್ದೆ."

ಫಣಿಯಮ್ಮ ಕೂಡಲೆ ಬೀಗಿತ್ತಿಯನ್ನು ಕರೆಸಿ "ಗಡಿಯಾರ ತರಿಸಿ" ಎಂದರು. ಗಿರಿಯಪ್ಪನವರಿಗೆ ಮತ್ತೆ ಗ್ರಹಚಾರಕ್ಕೆ ಬಂತು. ಊರಲ್ಲೆಲ್ಲಾ ಅಲೆದು ಒಂದಕ್ಕೆರಡು ಕೊಟ್ಟು ಒಂದು ಗಡಿಯಾರ, ಚೈನು ತಂದು ಅಳಿಯ ದೇವರಿಗೆ ಒಪ್ಪಿಸಿದರು. ಮೆರವಣಿಗೆ ಮುಂದೆ ಸುಸೂತ್ರವಾಗಿ ಸಾಗಿತು.

ಅಂತೂ ಇಂತೂ ಮದುವೆ ಮುಗಿಸಿ ಬೀಗರನ್ನು ಸಾಗಗಳಿಸುದುದೂ ಆಯಿತು. ಸುಬ್ಬರಾಯರೂ ರಂಗಮ್ಮನವರೂ ರಸ ಹಿಂಡಿದ ಕಿತ್ತಲೆಹಣ್ಣಿ ನಂತಾದರು. ಅವರ ಮೈಯಲ್ಲಿ ರಕ್ತವುಳಿದಿರಲಿಲ್ಲ. ಮುಖದಲ್ಲಿ ಕಳೆ ಯಿರಲಿಲ್ಲ.

ಗಿರಿಯಪ್ಪನವರೂ ಹೊರಟು ನಿಂತರು. ಒಂದು ದಿನ ಖಂಡಿತ ನಿಂತು ಊಟಮಾಡಿಕೊಂಡು ಹೋಗಬೇಕೆಂದು ಸುಬ್ಬರಾಯರು ಬಲವಂತ ಮಾಡಲು ಅವರ ಮಾತು ನಿರಾಕರಿಸಲಾರದೆ ಗಿರಿಯಪ್ಪ ನಿಂತರು.

ಗಿರಿಯಪ್ಪನವರಿಗೆ ಔತಣದ ಅಡಿಗೆ ಮಾಡಿಸಿ ಬಡಿಸಿ, ತಾಂಬೂಲದ ಜತೆ ಒಂದು ಸೊಗಸಾದ ಧೋತ್ರ ತಂದಿದ್ದರು. ಗಿರಿಯಪ್ಪ ಅದನ್ನು ನೋಡಿ

"ಇದೇನು ಸುಬ್ಬರಾಯರೇ. ದಯೆಯಿಟ್ಟು ಥೋತ್ರ ತೆಗೆದು ಕೊಂಡು ಹೋಗಿ. ನಾನು ಅದನ್ನು ಮುಟ್ಟುವುದಿಲ್ಲ."

"ಗಿರಿಯಪ್ಪ—ನೀವು ಹೀಗೆ ಹೇಳಿದರೆ ನಮ್ಮ ಮನಸ್ಸಿಗೆ ತುಂಬಾ ವ್ಯಥೆಯಾಗುತ್ತದೆ. ಮದುವೆಗಾಗಿ ನೀವು ಪಟ್ಟ ಶ್ರಮಕ್ಕೆ ನಾವೇನು ಪ್ರತ್ಯುಪಕಾರ ಮಾಡಬಲ್ಲೆವು ?"

"ಅದಕ್ಕಿದು ಗೌರವ ಧನವೋ ?"

"ನಿಮಗೆ ಗೌರವ ಧನ ಸಲ್ಲಿಸುವ ಯೋಗ್ಯತೆ ನಿಜವಾಗಿ ನಮಗಿಲ್ಲ ಗಿರಿಯಪ್ಪ. ನಮ್ಮ ಭಾಗದ ದೇವರಾಗಿ ನಿಂತು ಎಲ್ಲಾ ಕೆಲಸವನ್ನೂ ಸುಸೂತ್ರವಾಗಿ ಆಗುವಮಾಡಿಕೊಟ್ಟಿರಿ."

"ನೀವು ತೆಗೆದುಕೊಳ್ಳಲೇಬೇಕು ಶಾನುಭೋಗರೇ. ದಯೆಯಿಟ್ಟು ತೆಗೆದುಕೊಂಡು ನಮ್ಮ ಮನಸ್ಸಿಗೆ ಸಂತೋಷವನ್ನುಂಟುಮಾಡಿ."

ಎಂದು ರಂಗಮ್ಮನೂ ಅಂಗಲಾಚಿದರು. ಗಿರಿಯಪ್ಪನಿಗೆ ಬೇರೆ ಮಾರ್ಗ ಉಳಿಯಲಿಲ್ಲ. 'ಆಗಲಿ' ಎಂದು ಒಪ್ಪಿಕೊಂಡರು.

"ಶಾನುಭೋಗರೇ."

"ಏನು ಸುಬ್ಬರಾಯರೇ."

"ನಾವು ಇನ್ನು ಎಷ್ಟು ಕೊಡಬೇಕಾಗುತ್ತೆ ?"

"ಮದುವೆ ಲೆಕ್ಕದ್ದೇ."

"ಹೂ."

"ಅದನ್ನು ನಿಧಾನವಾಗಿ ಮಾತನಾಡೋಣ."

"ಲೆಕ್ಕ ತಿಳಿಸಿದರೆ ಒಳ್ಳೆಯದು. ನಿಮಗೆ ಕೊಡಬೇಕಾದ ಹಣದ ಏರ್ಪಾಟು ಮಾಡುವುದಕ್ಕಾದರೂ ಅನುಕೂಲವಾದೀತು."

"ಲೆಕ್ಕ ಬೇಕಾದರೆ ಕೊಡುತ್ತೇನೆ ಸುಬ್ಬರಾಯರೇ. ಆದರೆ ನನಗೆ ಕೊಡುವ ಹಣದ ಬಗ್ಗೆ ಅಷ್ಟು ಯೋಚನೆ ಮಾಡಬೇಡಿ. ನಿಧಾನವಾಗಿ ಕೊಡಿ. ನನಗೆ ಈಗ ಹಣದ ತರಾತುರಿಯಿಲ್ಲ."

"ಹಾಗೇ ಆಗಲಿ. ಲೆಕ್ಕ ತಿಳಿಸಿ."

"೩೦೦೦ ವರಶುಲ್ಕ—ಮದುವೆ ಖರ್ಚು ೧,೬೦೦."

"ವರನಿಗೆ ಕೊಟ್ಟ ಗಡಿಯಾರ, ಚೈನು ಸೇರಿಸಿದ್ದೀರಾ."

“ಅದನ್ನೇಕೆ ಸೇರಿಸಲಿ. ಅದು ಅವನಿಗೆ ನನ್ನ ಉಡುಗೊರೆ.”

“ಹಾಗಾದರೆ ನಾನೆಷ್ಟು ಕೊಡಬೇಕಾಗುತ್ತೆ ?”

“ಇನ್ನು ೬೦೦ ರೂಪಾಯಿ.”

“ಹೇಗೆ ಶಾನುಭೋಗರೇ. ಜಮೀನಿಗೆ ೩,೦೦೦ ಬರುತ್ತದೆಂದು ಹೇಳಿದ್ದಿರಿ. ಆ ಲೆಕ್ಕದ ಪ್ರಕಾರ ನಾನು ನಿಮಗೆ ೧,೬೦೦ ಕೊಡಬೇಕಾಗುತ್ತದೆ.”

“೩,೦೦೦ ಅಲ್ಲ ೪,೦೦೦ಕ್ಕೆ ಗಿರಾಕಿ ಕುದುರಿಸಿದೆ.”

ಉಳಿದಿದ್ದ ಸಾಲ ೬೦೦ ರೂಪಾಯಿ ಎಂದು ಖಚಿತವಾದ ಮೇಲೆ ಸುಬ್ಬರಾಯರು ಸಂತೋಷಿಸಿದರು.

“ಗಿರಿಯಪ್ಪ—ನೀವಿಲ್ಲದಿದ್ದರೆ ನಮ್ಮ ಗತಿಯೇನು ?”

“ಬಿಡಿ ಸುಬ್ಬರಾಯರೇ, ಯಾವ ಮಾತು. ದೇವರು ಹೇಗೋ ಸಹಾಯ ಒದಗಿಸುತ್ತಿದ್ದ. ನಿಮಗೆ ಸಹಾಯವಾಡುವುದಕ್ಕೆ ನಾನ್ಯಾವ ದೊಣ್ಣೇನಾಯಕ.”

“ದೊಡ್ಡವರು. ನಿಮ್ಮ ಬಾಯಲ್ಲಿ ದೊಡ್ಡ ಮಾತೇ ಬರುತ್ತೆ.”

“ಸರಿ. ಮುಂದಿನ ಕೆಲಸಕಾರ್ಯ ಈಗಿನಿಂದಲೇ ಯೋಚನೆಮಾಡಿ. ನಿಮ್ಮ ಬೀಗರು ಬಹಳ ದಿವಸ ತಮ್ಮ ಸೊಸೆಯನ್ನು ನಿಮ್ಮ ಮನೆಯಲ್ಲಿ ಬಿಡುವಂತಿಲ್ಲ. ಶೀನೂ ಬೆಳಗಾಂವಿಗೋ ಪುಣೆಗೋ ಹೋಗುವ ಮೊದಲೇ ಪ್ರಸ್ತವೂ ಆಗಿಹೋಗಲಿ ಎಂದು ಹೇಳುತ್ತಿದ್ದರು.”

“ಅದಕ್ಕಿನ್ನೊಂದು ಸಾವಿರವೋ ಸಾವಿರದೈನೂರೋ ಒದಗಿಸಿಕೊಳ್ಳಬೇಕಲ್ಲ ಗಿರಿಯಪ್ಪ.”

“ಯೋಚನೆಮಾಡಬೇಡಿ. ಅಂಥ ಕಾಲಬಂದರೆ ನಾನು ಎಲ್ಲಿಯಾದರೂ ತಂದುಕೊಡುತ್ತೇನೆ. ಇನ್ನು ಊರಿನಲ್ಲಿ ಏನಾಗಿದೆಯೋ ನೋಡಿಬರುತ್ತೇನೆ.”

“ಯಾವಾಗ ಬರುತ್ತೀರಿ.”

“ಮುಂದಿನ ವಾರ ಒಂದು ಕೇಸಿದೆ. ಅದಕ್ಕೆ ನಾನು ಬಂದರೂ ಬರಬೇಕಾಗುತ್ತೆ.”

ಗಿರಿಯಪ್ಪನವರನ್ನು ಸುಬ್ಬರಾಯರು ಮರ್ಯಾದೆಯಿಂದ ಬೀಳ್ಕೊಟ್ಟರು.

೯

ಫಣಿಯಮ್ಮನಿಗೆ ಲಗ್ನ ಸಮಾಧಾನವನ್ನುಂಟುಮಾಡಲಿಲ್ಲ. ಅವರು ತಮ್ಮ ಕಡೆಯವರಿಗೆ ಕೊಟ್ಟ ಉಡುಗೊರೆ ಸಾಲದೆಂದು ಫಣಿಯಮ್ಮನ ತರ್ಕ. ಅವಸರಪಟ್ಟು ಈ ಸಂಬಂಧಮಾಡಿದ್ದು ತಮ್ಮ ಯಜಮಾನರ ದುಡುಕತನ ವೆಂದು ಅವರು ಗ್ರಹಿಸಿದರು. ಒಂದು ದಿನ ಗಂಡ ಹೆಂಡತಿಗೆ ವಾದ ಬೆಳೆಯಿತು.

"ಆ ಗಿರಿಯಪ್ಪನ ಮಾತಿಗೆ ನೀವು ಮರುಳಾದಿರಿ" ಎಂದರು.

"ನೀನು ಆಗಲಿಲ್ಲವೇನು ?"

"ನಾನು ಯೋಚನೆಮಾಡುತ್ತಿರುವಾಗಲೇ ನೀವು 'ಹೂ' ಎಂದಿರಿ."

"ಹೆಣ್ಣು ಏನಾಗಿದೆ ?"

"ಏನಾದರೂ ಆಗಿರಲಿ. ಅದರ ರೂಪ ನೋಡುತ್ತಾ ನಾನು ಕುಳಿತು ಕೊಳ್ಳಲೇ ?"

"ಶೀನೂ ಸಂತೋಷಪಟ್ಟನೋ ಇಲ್ಲವೋ ?"

"ಹುಡುಗ, ಅವನಿಗೇನು ತಿಳಿಯುತ್ತೆ."

"ಸರಿ. ನಿನಗೇನು ಗುನಗಾಯಿತು. ನಿನಗೂ ಸೊಗಸಾದ ಸೀರೆ ಓದಿಸಿದರಲ್ಲಾ."

"ನನ್ನ ಮಾತಿರಲಿ ಅಂದ್ರೆ. ಸುಶೀಲಂಗೆ ಒಂದೆಳೆ ಜರತಾರಿ ಇರೋ ಸೀರೆ ಕೊಡಬೇಡವೇ ?"

"ಅವಳು ಅದಕ್ಕೆ ಆಕ್ಷೇಪಿಸಿದಳೇ ?—ಸುಶೀಲಾ—ಇಲ್ಲಿ ಬಾಮ್ಮ."

ಸುಶೀಲಾ ಉಪಕರಣೆ ತೊಳೆಯುತ್ತಿದ್ದವಳು ಮಾವನವರ ಧ್ವನಿ ಕೇಳಿ ಬಂದಳು.

"ನಿನಗೆ ಕೊಟ್ಟಸೀರೆ ಚೆನ್ನಾಗಿಲ್ಲವೇನು ?"

"ಯಾವ ಸೀರೆ ?"

"ಮೊನ್ನೆ ಶೀನು ಮದುವೆಯಲ್ಲಿ ಓದಿಸಿದ್ದು."

"ಅದಕ್ಕೇನಾಗಿದೆ. ಸೊಗಸಾಗಿದೆ."

"ಸಾಕು ಸುಮ್ಮನಿರೇ—ನಿನಗೇನು ಗೊತ್ತಾಗತ್ತೆ—ಹೋಗು."

ಎಂದು ಫಣಿಯಮ್ಮ ಗದರಿದರು.

"ಎಲ್ಲಾ ಆಕ್ಷೇಪಣೆಯೂ ನಿನ್ನದೇ—ಅವರು ತಾನೆ ಎಷ್ಟೊಂತ ಕೊಡುತ್ತಾರೆ ಹೇಳು."

"ಕೊಡೋವಾಗ ಕೊಡದೆ ಇನ್ನು ಯಾವಾಗ ಕೊಡುತ್ತಾರೆ ಅಣ್ಣಯ್ಯ."

ಎಂದು ನರಸಿಂಹಮೂರ್ತಿ ತಾಯಿ ಕಡೆ ವಕಾಲತ್ತು ವಹಿಸಿದ.

"ಏನೋಪ್ಪ. ನೀವು ತಾಯಿ ಮಕ್ಕಳ ಮಾತು ನನಗರ್ಥವೇ ಆಗಲ್ಲ."

"ಹೋಗಲಿ. ಮುಂದೆ ಶೀನೂ ವಿಚಾರ ಏನುಮಾಡುತ್ತೀರಿ?"

"ಲಾ ಪರೀಕ್ಷೆಗೆ ಓದುತ್ತಾನಂತಲ್ಲಾ ?"

"ಲಾನೂ ಬೇಡ ಏನೂ ಬೇಡಾಂದ್ರೆ."

"ಈ ಸಾರೆ ಫಲಿತಾಂಶ ಹೊರಬಿದ್ದ ಮೇಲೆ ಅವನು ಒಂದು ಕೆಲಸಕ್ಕೆ ಸೇರಲಿ ಎಂದು ನನ್ನದೂ ಅಪೇಕ್ಷೆ. ನೀನು ಏನು ಹೇಳುತ್ತೀ ನರಸಿಂಹಮೂರ್ತಿ."

"ಅದೇ ಸರಿ ಅಣ್ಣಯ್ಯ."

"ಹಾಗಾದರೆ ವೈಶಾಖದಲ್ಲಿ ಪ್ರಸ್ತದ ಶಾಸ್ತ್ರವೂ ಮುಗಿಸಿಬಿಡಲಿ."

"ಆ ಮಾತು ಗಿರಿಯಪ್ಪನವರ ಕೈಲಿ ಹೇಳಿಕಳಿಸಿದ್ದೆವಲ್ಲಾ."

"ನೋಡಿ—ನಿಮ್ಮ ಬೀಗ ಇನ್ನೂ ಜವಾಬು ಕಳುಹಿಸುತ್ತಾ ಇದ್ದಾನೆ."

"ಕಳಿಸ್ತಾರೆ ಬಿಡೇ. ಮದುವೆ ಮುಗಿದ ಮೇಲೆ ನೂರಾರು ಕೆಲಸ ಕಾರ್ಯಗಳಿರುತ್ತವೆ. ಅವರಿಗೂ ಬಿಡುವಾಗಬೇಡವೇ?"

"ನೀವು ತೂಕಡಿಸುವವರಿಗೆ ಹಾಸಿಗೆ ಹಾಸಿಕೊಡಿ."

"ಇಲ್ಲ ಪುಣ್ಯಾತ್ಗಿತ್ತಿ ತೂಕಡಿಸುವುದಿಲ್ಲ. ಅದಕ್ಕೆ ನೀನು ಅವಕಾಶ ಕೊಟ್ಟರೆ ತಾನೇ. ಸುಬ್ಬರಾಯರ ಹತ್ತಿರ ವಿಷಯ ಪ್ರಸ್ತಾಪಮಾಡು ತ್ತೇನೆ."

ಎಂದು ಹೆಂಡತಿಗೆ ಸಮಾಧಾನ ಹೇಳಿದರು.

ತಾನು ಲಾ ಪರೀಕ್ಷೆಗೆ ಹೋಗುವುದು ಸಾಧ್ಯವಿಲ್ಲವೆಂದು ತಿಳಿದ ಕೆಲವು ದಿವಸ ಶೀನು ಅಸಮಾಧಾನಗೊಂಡ. ತಾಯಿ ಮಗನನ್ನು ಕೂರಿಸಿಕೊಂಡು ಚೆನ್ನಾಗಿ ಬೋಧಿಸಿ ೩,೦೦೦ರೂಪಾಯಿ ಬಡ್ಡೀಗೆ ಹಾಕಿದರೆ ತಮಗೇ ಒಳ್ಳೆ

ಯದೆಂದು ತಿಳಿಸಿದರು. ಅಮ್ಮ ಹೇಳುವುದೂ ನಿಜವೆಂದುಕೊಂಡು ಶೀನೂ ಸುಮ್ಮನಾದ.

ವೈಶಾಖಮಾಸದಲ್ಲಿ ಪ್ರಸ್ತದ ಶಾಸ್ತ್ರ ಮುಗಿಸಿ ಹೆಣ್ಣನ್ನು ಕರೆದು ತಂದು ಬಿಡಬೇಕೆಂದು ವೆಂಕಟಾಚಲಯ್ಯ ಸುಬ್ಬರಾಯರಿಗೆ ಕಟ್ಟಪ್ಪಣೆ ಮಾಡಿದರು. ಸುಬ್ಬರಾಯರು ಕೋಲೇಬಸವನಂತೆ 'ತಥಾಸ್ತು' ಎಂದರು

ಗೌರಿ ಇನ್ನು ಮನೆ ಬಿಟ್ಟು ಹೋಗುವ ಕಾಲ ಬಂತೆಂದು ತಿಳಿದ ಮೇಲೆ ರಂಗಮ್ಮ ಭೂಮಿಗಿಳಿದು ಹೋದರು. ಗೌರಿಯ ಮುಗ್ಧಮಧುರ ಮುಖ ನೋಡಿಕೊಂಡು ಅವರು ಎಲ್ಲ ಚಿಂತೆಗಳನ್ನು ಮರೆಯುತ್ತಿದ್ದರು. ತಾಯಿಗೆ ಗೌರಿಯೇ ಸಮಾಧಾನ ಹೇಳಬೇಕಾಗಿ ಬಂತು.

"ಇದೇ ಊರಿನಲ್ಲಿರುತ್ತೇನಮ್ಮಾ. ಸುಮ್ಮನೇಕೆ ಕಣ್ಣೀರು ಹಾಕುತ್ತೀ?"

"ಹೌದು ಗೌರ. ಸೀತೂನೂ ಇದೇ ಊರಿನಲ್ಲಿದ್ದಾಳೆ, ಬಂದ ಭಾಗ್ಯವೇನು ಹೇಳು."

"ಓರಗಿತ್ತಿ ತುಂಬ ಒಳ್ಳೆಯವಳ ಹಾಗೆ ಕಾಣುತ್ತಾಳೆ ಅಮ್ಮ."

"ಸುಶೀಲಮ್ಮನೇ?"

"ಹೂ, ಅವತ್ತು ಗಡಿಯಾರದ ಮಾತು ಬಂತು ನೋಡು. ಅವಳ ಎಷ್ಟು ಬೇಜಾರು ಮಾಡಿಕೊಂಡಳು ಬಲ್ಲೆಯಾ?"

"ದೊಡ್ಡವರ ಮನೆ ಹೆಣ್ಣು. ಅವಳನ್ನು ಹೆತ್ತ ತಾಯಿ ಹೊಟ್ಟೆ ತಣ್ಣಗಿರಲಿ."

"ಅಮ್ಮ"

"ಏನೇ ತಾಯಿ?"

"ನೀನೂ ಅಣ್ಣಾ ತುಂಬಾ ಯೋಚಿಸಿ ಯೋಚಿಸಿ ಕೊರಗುತ್ತಿದ್ದೀರಿ. ಎಲ್ಲಾ ನನ್ನಿಂದಲ್ಲವೇ ಇಷ್ಟು ಕಷ್ಟ."

"ಕಷ್ಟಾಂದರೆ ಏನು ಮಾಡೋದಿಕ್ಕಾಗತ್ತಮ್ಮಾ....ನಮ್ಮ ನಮ್ಮ ಮಕ್ಕಳಿಗೆ ನಾವು ಕಷ್ಟಪಡದೆ ಇತರರು ಕಷ್ಟಪಡುತ್ತಾರೆಯೇ?"

"ಆದರೂ...."

"ಆದರೂ ಗೀದರೂ ಯೋಚಿಸಬೇಡ ಗೌರಾ. ಈಗಾಗಲೇ ಇಲ್ಲದ ಕಷ್ಟ ವ್ಯಸನ ನೀನು ಮನಸ್ಸಿಗೆ ಹಚ್ಚಿಕೊಳ್ಳಬಾರದು."

"ಹೆಚ್ಚಿಕೊಳ್ಳಬಾರದು ಎಂದು ಪ್ರಯತ್ನಿಸುತ್ತೇನೆ. ಆದರೆ ಸಾಧ್ಯವಾಗುವುದಿಲ್ಲ. ಏನು ಏನೋ ಯೋಚನೆಗಳು ಬಂದು ಮನಸ್ಸನ್ನು ಕಲಕುತ್ತವೆ."

"ಹೌದು, ತಾಪತ್ರಯ ನಮ್ಮ ರಕ್ತದಲ್ಲಿಯೇ ಬಂದಿದೆ. ಅದರ ಪ್ರಭಾವ ಹಸುಗಂದ ನಿನ್ನ ಮೇಲೂ ಬಿದ್ದಿದೆ."

ಇದಕ್ಕಿದ್ದಂತೆ ಗೌರ ಎದ್ದು ಧಡಕ್ಕನೆ ಒಳಗೆ ಓಡಿಹೋದಳು. ರಂಗಮ್ಮ ತಿರುಗಿ ನೋಡಿದಾಗ ಎದುರಿಗೆ ಶ್ರೀನಿವಾಸ ನಿಂತಿದ್ದ. ಅವರೂ ಎದ್ದು ನಿಂತರು.

"ಮಾವನವರು ಇನ್ನೂ ಮನೆಗೆ ಬಂದಿಲ್ಲವೇ."

"ಇಲ್ಲ. ಒಳಗೆ ಬನ್ನಿ."

ತೊಟ್ಟಿಯಲ್ಲಿ ಕುಳಿತ. ರಂಗಮ್ಮ ಒಳಗೆ ಹೋಗಿ ಗೌರನಿಗೆ "ಹೋಗು, ನಿನ್ನ ಯಜಮಾನರು ಬಂದಿದ್ದಾರೆ. ಮಾತನಾಡಿಸು. ನಾನು ಕಾಫಿ ಮಾಡಿ ತಂದುಕೊಡುತ್ತೇನೆ."

"ಒಲ್ಲೆ. ನನಗೆ ನಾಚಿಕೆಯಾಗುತ್ತದೆ."

"ಎಂಥ ನಾಚಿಕೆಯೇ? ನಿನ್ನ ಗಂಡನ್ನ ನೀನು ಮಾತನಾಡಿಸುವುದಕ್ಕೆ ನಾಚಿಕೆಯೇ."

"ಇಲ್ಲಮ್ಮ—ನಾನು ಹೋಗುವುದಿಲ್ಲ."

"ಹೋಗೇ ಪುಣ್ಯಾತ್ಗಿತ್ತಿ—ಅಪರೂಪಕ್ಕೆ ಬಂದಿದ್ದಾರೆ. ಅವರೂ ಮನೆಯಲಿಲ್ಲ."

ಎಂದು ಗೌರನನ್ನು ಹೊರಗೆ ನೂಕಿದರು.

ಗೌರ ನಾಚಿ ಬಾಗಿಲಲ್ಲೇ ನಿಂತಳು ಶ್ರೀನಿವಾಸ ಅವಳನ್ನು ದಿಟ್ಟಿಸಿ ನೋಡಿದ. ಗೌರ ಅಲಂಕಾರಮಾಡಿಕೊಂಡಿರಲಿಲ್ಲ. ತಲೆ ಸರಿಯಾಗಿ ಬಾಚಿಕೊಂಡೂ ಇರಲಿಲ್ಲ. ಉಟ್ಟದ್ದುದೊಂದು ಸಾಧಾರಣ ಸೀರೆ. ಆದರೆ ಅವಳ ರೂಪ ವಸ್ತ್ರಾಭರಣಗಳ ನೆರವಿನಿಂದ ಮೆರೆಯಬೇಕಾಗಿರಲಿಲ್ಲ. ಮದುವೆಯಾದ ಮೇಲೆ ಸ್ವಲ್ಪ ಮೈಕೈ ತುಂಬಿಕೊಂಡಿತ್ತು. ಸ್ವಲ್ಪ ಬಿಗಿಯಾಗಿದ್ದ ಕುಪ್ಪಸದಿಂದ ತೋಳಿನ ಮೃದು ಮಾಂಸಖಂಡಗಳು ಹೊರಗೆ ಇಣುಕಿ ಹಾಕಿದ್ದವು. ಕುಪ್ಪಸವನ್ನು ತೂರಿ ಬರುವಂತೆ ತುಂಬಿದ ಸ್ತನಗಳುಎದ್ದು ಕಾಣು

ತ್ತಿದ್ದವು. ಶ್ರೀನಿವಾಸ ಕಣ್ತುಂಬ ನೋಡಿದ ತನ್ನ ಅನಾಘ್ರಾತ ಕುಸುಮ ವನ್ನು—ಅಸ್ವಾದಿತ ಫಲವನ್ನು.

ಗೌರ ಸುಂದರಿಯೆಂದು ಬಲ್ಲ. ಇಷ್ಟು ಸುಂದರಿಯೆಂಬುದನ್ನರಿಯ. ಅವನಿಗೆ ರೋಮಾಂಚವಾಯಿತು. ಮದುವೆ ಸಮಯದಲ್ಲಿ ಎಲ್ಲರೂ ತಮ್ಮ ತಮ್ಮ ಒಡವೆಗಳನ್ನು ಗೌರಿಯ ಮೇಲೆ ಹೇರಿ ಅವಳನ್ನು ಉತ್ಸವದ ಗೊಂಬೆ ಮಾಡಿದ್ದರು. ವಸ್ತ್ರಾಭರಣಗಳ ಹೊರೆಯಲ್ಲಿ ಗೌರಿ ಎಲ್ಲಿಯೋ ಅಡಗಿ ಹೋಗಿದ್ದಳು. ಈಗ ಎದುರಿಗಿದ್ದವಳು ನಿಜವಾದ ಗೌರಿ.

ಮದುವೆಯಾದ ಮೇಲೆ ಗೌರಿಯ ಜೀವಕುಸುಮ ಅರಳಿತ್ತು. ಮದುವೆ ಗಡಿಬಿಡಿಯಲ್ಲಿ ಗಂಡನನ್ನು ಅವಳು ಕಣ್ತುಂಬ ನೋಡಿಯೂ ಇರಲಿಲ್ಲ. ಆದರೆ ಯಾವುದೋ ಶಕ್ತಿ ಗೌರಿ, ಶ್ರೀನಿವಾಸನನ್ನು ಕೂಡಿಸಿತ್ತು.

" ನೋಡಲ್ಲಿ. ಮೊಣಕಾಲ ಮರೆಯಲ್ಲಿ ತಲೆತಗ್ಗಿಸಿ ಕುಳಿತಿರುವ ಹೆಣ್ಣು ನಿನ್ನ ಬಾಳ ನಂದಾದೀಪ. ಅವಳ ಬಾಳನೌಕೆಯಲ್ಲಿ ನೀನು ಪ್ರಯಾಣ ಮಾಡಬೇಕು."

" ನೋಡು ತಾಯಿ. ಹಸೆಯ ಮೇಲೆ ಗಂಭೀರವಾಗಿ ಕುಳಿತು ನಿನ್ನನ್ನು ನೋಡಲು ತವಕಪಡುತ್ತಿದ್ದರೂ ಹಿರಿಯರಿಗಂಜಿ ಕುಳಿತಿರುವ ಗಂಡು ನಿನ್ನ ಸ್ವಾಮಿ. ಆತನ ಸುಖ ನಿನ್ನ ಸುಖ—ಆತನ ಕಷ್ಟ ನಿನ್ನ ಕಷ್ಟ—ಆತನ ಜನ ನಿನ್ನ ಜನ."

ಎಂದು ಅವ್ಯಕ್ತಶಕ್ತಿಯೊಂದು ನುಡಿದಿತ್ತು.

ಗೌರ ತನ್ನ ಗಂಡನಿಗೆ ಅರಿವಾಗದಂತೆ ಅವನನ್ನು ನೋಡಿದಳು. ಒಂದು ಹೆಮ್ಮೆ, ಆಸೆ, ಅಭಿಮಾನ ಅವಳ ಹೃದಯಪಾತ್ರೆಯನ್ನು ತುಂಬಿತು.

ಇಬ್ಬರೂ ಒಬ್ಬರನ್ನೊಬ್ಬರು ನೋಡುತ್ತಿದ್ದಂತೆ ಒಮ್ಮೆ ಕಣ್ಣು ಕೂಡಿತು. ಶ್ರೀನಿವಾಸ ನಕ್ಕುಬಿಟ್ಟ. ಗೌರಿಯ ತುಟಿಯಂಚಿನಲ್ಲಿ ಮಧುರ ಮುಗುಳ್ನಗೆ ಚಿಮ್ಮಿತು.

" ಇಲ್ಲಿ ಬಾ." ಎಂದು ಕರೆದ.

ಗೌರಿ ನಿಂತ ಜಾಗದಿಂದ ಅಲುಗಾಡಲಿಲ್ಲ.

" ನಾನೇ ಬಂದು ಕರೆದುಕೊಂಡು ಬರಬೇಕೇನು ? "

" ಏನೂ ಬೇಡಿ."

"ಹಾಗಾದರೆ ನೀನಲ್ಲಿ—ನಾನಿಲ್ಲಿಯೇ ಇರಬೇಕೇ?"

"ಗೌರಾ"—ಎಂದು ತಾಯಿ ಕೂಗಿದರು.

ಮಗಳ ಕೈಗೆ ಎರಡು ಬೆಳ್ಳಿ ಲೋಟಗಳಲ್ಲಿ ಕಾಫಿ. ಮನೆಯಲ್ಲಿ ಮಾಡಿದ್ದ ಚಕ್ಕುಲಿ, ಕೊಡಬಳೆ, ಎರಡು ರಸಬಾಳೆ ಹಣ್ಣು ಇಟ್ಟ ಒಂದು ಬೆಳ್ಳಿ ತಟ್ಟೆ ಕೊಟ್ಟು

"ಒಳಗೇ ಹೋಗಿ—ರೂಮಿಗೆ" ಎಂದರು

ಗೌರಿ ತಟ್ಟೆಯನ್ನು ಕೈಯಲ್ಲಿ ಹಿಡಿದಳು. ಆದರೆ ಮುಂದಡಿಯಿಡಲು ನಾಚಿಕೆ.

"ಸುಮ್ಮನೆ ಹೋಗೇ, ಏನೋ ಪಿರುಕಣೆ ಮಾಡುತ್ತಾಳೆ."

ಗೌರಿ ತಟ್ಟೆಯನ್ನು ತೆಗೆದುಕೊಂಡು ರೂಮಿಗೆ ಹೋಗಿ ಅಲ್ಲಿ ನಿಂತಳು. ಶ್ರೀನಿವಾಸ ಅವಳನ್ನು ಹಿಂಬಾಲಿಸಿದ. ರೂಮ್ ಹೊಕ್ಕು ಬಾಗಿಲು ಮುಂದಕ್ಕೆ ಮಾಡಿದ.

ಗೌರಿ ನಿಂತಲ್ಲೇ ನಿಂತಿರುತ್ತಿದ್ದಳು. ಶ್ರೀನಿವಾಸ ಪಕ್ಕದಲ್ಲಿದ್ದ ಒಂದು ಕುರ್ಚಿ ಮೇಲೆ ಕುಳಿತ. ಸ್ವಲ್ಪ ಹೊತ್ತು ಇಬ್ಬರೂ ನೀರವ.

"ಕಾಫಿ ಆರಿಹೋಗುತ್ತೆ"ಎಂದಳು,

"ಕೊಡದೆ ನೀನು ಜಪಮಾಡುತ್ತಿದ್ದರೆ ನಾನೇನು ಮಾಡಲಿ."

ತಿಂಡಿ ಪದಾರ್ಥಗಳನ್ನು ನೀಡಿದಳು. ಶ್ರೀನಿವಾಸ ಕೈಗೊಂದು ಚಕ್ಕುಲಿ ತೆಗೆದುಕೊಂಡು ತಿನ್ನುತ್ತಾ

"ನೀನೂ ತೆಗೆದುಕೋ."

"ನನಗೆ ಆಗಿದೆ."

"ನನಗೂ ಆಗಿದೆ. ನೀನು ಕೊಟ್ಟೆಯೆಂದು ನಾನು ತೆಗೆದುಕೊಂಡೆ. ನಾನು ಕೊಡುತ್ತೇನೆಂದು ನೀನೂ ತೆಗೆದುಕೊಳ್ಳಬೇಕು."

ಎದ್ದು ಕೈಯಲ್ಲಿದ್ದ ಚಕ್ಕುಲಿಯನ್ನು ಅವಳ ಬಾಯಿಗಿಡಲು ಹೋದ. ಅವಳು ಅದನ್ನು ಕೈಗೆ ತೆಗೆದುಕೊಂಡು ಒಂದು ಚೂರು ಬಾಯಿಗೆ ಹಾಕಿಕೊಂಡಳು.

"ಹತ್ತಿರ ಕುಳಿತುಕೋ ಬಾ."

ಎಂದು ಹತ್ತಿರ ಎಳೆದುಕೊಂಡ. ಗೌರಿ ಕುಳಿತುಕೊಂಡಳು. ಅವಳ

ಆಪಾದಮಸ್ತಕ ಬೆವರಿತು. ಕಾಫಿ ಲೋಟ ಕೈಗೆ ತೆಗೆದುಕೊಂಡು, ಅವಳಿಗೂ ಅದರಲ್ಲಿಯೇ ಕುಡಿಸಿದ. ಗೌರನಿಗೆ ಅಂದು ಕಾಫಿ ವಿಶೇಷ ರುಚಿ ಕಟ್ಟ್ಹಾಯಿತು.

" ಏಕೆ ಮಾತೇ ಆಡಲ್ಲ—ನನ್ನ ಮೇಲೆ ಕೋಪವೇ ? "

" ಹೂ...."

" ಏಕೆ ? "

" ನೀವೇಕೆ ಇಲ್ಲಿ ಬರಲಿಲ್ಲ."

" ನಾನು ಬರಲಿ ಅನ್ನಿಸಿತ್ತೇ ನಿನಗೆ...."

" ಅನ್ನಿಸದೆ ಇರತ್ತೆ."

" ಹಾಗಾದರೆ ತಪ್ಪಾಯ್ತು—ಕ್ಷಮಿಸು. ಬಂದರೂ ನೀನು ಮಾತೇ ಆಡಿಸಲ್ಲ."

" ಆಡಿಸುತ್ತಿಲ್ಲವೇ ? "

" ಹೂ—ಉಹೂ ಅಂದರೆ ಮಾತಾಯ್ತೇ ? "

" ಇನ್ನೇನು ಆಡಬೇಕು."

" ಹೇಳಿಕೊಟ್ಟು ನಾನೇ ಅನ್ನಿಸಿಕೊಳ್ಳಲೇ ? "

" ತಿಳಿಯದಿದ್ದವರಿಗೆ ತಿಳಿದವರು ಹೇಳಿಕೊಡಬೇಕು."

" ಇದರಲ್ಲಿ ತಿಳಿಯದವರಾರು ? ತಿಳಿದವರಾರು ? "

" ಅದನ್ನೂ ನೀವೇ ಹೇಳಿ.

" ಗೌರಾ—ಸಿನೀಮಾಕ್ಕೆ ನಿನ್ನ ಕರೆದುಕೊಂಡು ಹೋಗಬೇಕೆಂದು ತುಂಬ ಇಷ್ಟ."

" ನನಗೂ ನಿಮ್ಮ ಜತೆ...."

" ಅಮ್ಮನ ಕಿವೀಗೆ ಬಿದ್ದೀತೇನೋ ಎಂದು ಭಯ."

" ನಾವು ಹೋದರೆ ಅವರು ಬೇಡವೆನ್ನುತ್ತಾರೆಯೇ ? "

" ಅಮ್ಮನ ವಿಷಯ ಹೀಗೇಂತ ಹೇಳೋದಿಕ್ಕೆ ಬರೋದಿಲ್ಲ."

" ಹಾಗಾದರೆ ಹೋಗುವುದು ಬೇಡ. ಅವರ ಮನಸ್ಸನ್ನು ಏತಕ್ಕೆ ಚಿಕ್ಕದು ಮಾಡಬೇಕು."

" ನೀನು ಎಲ್ಲಾ ಅರ್ಥಮಾಡಿಕೊಳ್ಳಬಲ್ಲೆ."

“ ಲಾ ಪರೀಕ್ಷೆಗೆ ಹೋಗುವುದೇನಾಯಿತು ?”

“ ಸದ್ಯಕ್ಕೆ ನಿಂತುಹೋಯಿತು. ಈಸಲ ರಿಸಲ್ಟ್ ಬಂದಕೂಡಲೆ ಕೆಲಸಕ್ಕೆ ಸೇರಬೇಕು ಅಂದುಕೊಂಡಿದ್ದೇನೆ.”

“ ಲಾ ಮುಗಿಸಿದ್ದರೆ ಚೆನ್ನಾಗಿತ್ತಲ್ಲ.”

“ ಹೌದು. ನನಗೂ ಅದೇ ಇಷ್ಟ. ಆದರೆ ಅಮ್ಮ ಅಪ್ಪ ಇಬ್ಬರಿಗೂ ಅದು ಬೇಡವಾಗಿದೆ. ”

“ಕೆಲಸಕ್ಕೆ ಎಲ್ಲಿ ಸೇರುತ್ತೀರಿ. ”

“ ನಾನಾ ಕಡೆ ಅರ್ಜಿ ಹಾಕಿದ್ದೇನೆ. ಎಲ್ಲಿ ಸಿಕ್ಕುತ್ತದೋ ಅಲ್ಲಿಗೆ ಹೋಗುವುದು. ”

“ ದೂರ ದೇಶವೇ ? ”

“ ನೋಡಬೇಕು. ಹೊಸಪೇಟೆ ಹೈಸ್ಕೂಲಿನಲ್ಲಿ ಒಂದು ಜಾಗ ಖಾಲಿಯಿದೆಯಂತೆ. ”

“ ಅಲ್ಲಿಗೆ ಒಬ್ಬರೇ ಹೋಗುತ್ತೀರಾ. ”

“ ಮೊದಲು ಒಬ್ಬನೇ ಹೋಗುತ್ತೇನೆ. ಅಲ್ಲಿ ಮನೆಗಿನೆ ಮಾಡಿ ನಿನ್ನ ಕರೆಸಿಕೊಳ್ಳುತ್ತೇನೆ.....ಬರುವುದಕ್ಕೆ ಭಯವೇ ? ”

“ ಭಯವೇಕೆ ? ”

“ ಅಲ್ಲಿ ಒಬ್ಬಳೇ ಇರಬೇಕಾಗುತ್ತದೆಂದು. ”

“ನೀವು ಇರುವಾಗ ನನಗೆ ಯಾವ ಭಯ.”

“ ನಾನಿನ್ನು ಹೊರಡುತ್ತೇನೆ.”

ಎಂದು ಎದ್ದ.

“ ಅಣ್ಣಾ ಬರುವ ತನಕ ಇರಬಾರದೇ ? ”

“ ಇಲ್ಲ. ಕೆಲಸವಿದೆ. ಇನ್ನೊಂದು ದಿವಸ ಬರುತ್ತೇನೆ. ”

“ ಇಷ್ಟು ಬೇಗ ಹೋಗಲೇಬೇಕೆ ? ”

“ ಹೂ—ಹೋಗಲೇಬೇಕಾಗಿದೆ. ”

ಶ್ರೀನಿವಾಸ ಹೊರಟುದನ್ನು ಕಂಡು ರಂಗಮ್ಮ ಬಾಗಿಲು ಬಳಿಬಂದರು.

“ ಇಲ್ಲೇ ಊಟಮಾಡಿಕೊಂಡು ಹೋಗಿದ್ದರೆ ಚೆನ್ನಾಗಿತ್ತು. ಗೌರಿ ಹೇಳಲೇ ಇಲ್ಲವೇನೋ ? ”

" ಹೇಳಿದಳು. ಸ್ವಲ್ಪ ಕೆಲಸವಿದೆ. ಇನ್ನೊಂದು ದಿವಸ ಬರುತ್ತೇನೆ. "
ಎಂದು ಹೊರಟೇಬಿಟ್ಟ.
" ಗೌರಿ ಕಣ್ಣಲ್ಲಿ ನೀರು ನಿಂತಿದ್ದುದನ್ನು ಕಂಡು ತಾಯಿ ನಕ್ಕರು.
" ಹುಚ್ಚು ಹುಡುಗಿ. ಇಷ್ಟು ಬೇಗ ಕರುಳು ಬಾಧಿಸುತ್ತಿಯೇನೇ?"
'' ಹೋಗಮ್ಮ''
ಎಂದಳು.

೧೦

ವೈಶಾಖ ಮಾಸ ಬರುವುದಕ್ಕೆ ತಡವಾಗಲಿಲ್ಲ. ದಿನ ಮನುಷ್ಯನ ಪರಿವೆಯಿಲ್ಲದಂತೆ ಜಾರುತ್ತದೆ. 'ನಾಳೆ'ಯನ್ನು ನಿರೀಕ್ಷಿಸುವಷ್ಟರಲ್ಲಿ ಅದು ಬಂದು 'ನಿನ್ನೆ'ಯ ಜತೆ ಸೇರಿರುತ್ತದೆ.

ವೆಂಕಟಾಚಲಯ್ಯನವರೇ ಜಾತಕ ನೋಡಿಸಿ ಗರ್ಭಾದಾನಕ್ಕೆ ಒಂದು ಮುಹೂರ್ತ ನಿಶ್ಚಯಿಸಿ ಹೇಳಿಕಳುಹಿಸಿದರು. ಸುಬ್ಬರಾಯರು ಹಾಸಿಗೆ, ಮಂಚ, ರೇಷ್ಮೆ ಸೀರೆ, ಗೃಹಕೃತ್ಯದ ಪಾತ್ರೆ ಪದಾರ್ಥಗಳನ್ನು ಹೊಂದಿಸಲು ಹೊರಟರು. ಗಿರಿಯಪ್ಪನವರ ಸಾಲ ಇನ್ನೂ ತೀರಿರಲಿಲ್ಲ. ಅದರ ಜತೆಗೆ ಈ ಹೊರೆಯೂ ಸೇರುತ್ತದಲ್ಲಾ ಎಂದು ಸುಬ್ಬರಾಯರ ಕೊರಗು. ಹೊರೆಯೋ, ಭಾರವೋ ಗೌರ ಸುಖವಾಗಿದ್ದರೆ ಸಾಕು ಎಂಬೊಂದೇ ಯೋಚನೆ ಅವರ ಮನಸ್ಸನ್ನು ಮುತ್ತಿತ್ತು.

ರಂಗಮ್ಮನ ಮನಸ್ಸು ಬಹು ಭಾರವಾಗಿತ್ತು. ಗೌರ ಲಂಗ ಹಾಕಿಕೊಂಡು, ಕರುಳಲ್ಲಿ ಗೊಂಬೆಯಿಟ್ಟುಕೊಂಡು ಆಡುತ್ತಿದ್ದುದು ಇನ್ನೂ ಕಣ್ಣಲ್ಲಿ ಕಟ್ಟಿತ್ತು. ' ನನ್ನ ಮಗು ಇಷ್ಟು ಬೇಗ ದೊಡ್ಡದಾಗಿ ಗಂಡನ ಮನೆ ಸೇರುವಂತಾಯಿತೇ ' ಎಂದು ಯೋಚಿಸಿದರು. ಹೌದು. ಸತ್ಯ ಸುಳ್ಳಿಗಿಂತ ಕಠೋರವಾಗಿತ್ತು. ಇದೇ ಮಗು ಇನ್ನು ವರ್ಷವೊಪ್ಪತ್ತಿನಲ್ಲಿ ಗೊಂಬೆಯ ಬದಲು ನಿಜವಾದ ಮಗುವನ್ನೇ ಎತ್ತಿಕೊಳ್ಳುತ್ತದೆ.

ರಂಗಮ್ಮ ಯೋಚಿಸಿದರು. ಗೌರ ಗಂಡನ ಮನೆಗೆ ಹೊರಟು ಹೋಗುತ್ತಾಳೆಂದು ಚಿಂತಿಸಬೇಕೇ? ಲೋಕಚಕ್ರ ಉರುಳುತ್ತಿರಲೇಬೇಕು. ತಾವೂ ಒಂದು ಕಾಲದಲ್ಲಿ ಗಂಡನ ಮನೆ ಸೇರುವ ದಿನ ಬಂದಿತು. ಆಗ

ತಮ್ಮ ತಾಯಿಯೂ ಹೀಗೇ ಕುಳಿತು ಕಣ್ಣೀರ್ಗರೆದರು. ಅವ್ಯಾಹತವಾಗಿ ಈ ಚಕ್ರ ನಡದೇ ಇರುತ್ತದೆ. ನಾಳೆ ತನ್ನ ಮಗಳನ್ನು ಕಳಿಸಬೇಕೆಂದು ಗೌರನೂ ಯೋಚಿಸಬಹುದು.

ಬುದ್ಧಿಗೆ ತರ್ಕ ಬಹುಬೇಗ ಸಮಾಧಾನ ನೀಡಿತು. ಆದರೆ ಮನಸ್ಸು ಬುದ್ಧಿಯ ಬೋಧನೆಯನ್ನು ನಿರಾಕರಿಸಿತು. ಅದರ ಅಳಲು ತರ್ಕ ದಿಂದ ನಿವಾರಣೆಯಾಗುವಂತಿರಲಿಲ್ಲ.

ಫಣಿಯಮ್ಮ ತಮ್ಮ ಲೆಕ್ಕದಲ್ಲಿದ್ದರು. ಮದುವೆಯಲ್ಲಿ ಬೀಗರ ಕಡೆ ಯವರು ಅದು ಕೊಡಲಿಲ್ಲ—ಇದು ಕೊಡಲಿಲ್ಲ. ಅವುಗಳನ್ನೆಲ್ಲಾ ಪ್ರಸ್ತದಲ್ಲಿ ವಸೂಲ್ಮಾಡಿಕೊಳ್ಳಬೇಕೆಂಬ ಹಂಚಿಕೆ ಅವರದು. ಅವರ ಮನಸ್ಸಿನಲ್ಲಿ 'ಸುಬ್ಬರಾಯ ಪಕ್ಕಾ ಕಳ್ಳ. ಕುಡಿಕೆ ಹೊನ್ನು ಮುಚ್ಚಿಟ್ಟುಕೊಂಡು, ಬಡತನ ನಟಿಸುತ್ತಿದ್ದಾನೆ. ಸ್ವಲ್ಪ ಗಟ್ಟಿಯಾಗಿ ನಡೆದುಕೊಂಡರೆ ಒಳಗಿನ ಗಂಟು ತಾನೇ ತಾನಾಗಿ ಹೊರಬರುತ್ತದೆ' ಎಂದಿತ್ತು. ನಾಲ್ಕು ದಿವಸ ಮುಂಚಿತವಾಗಿಯೇ ಫಣಿಯಮ್ಮ ಬೀಯಗಿತ್ತಿಯನ್ನು ಕಂಡು ತಮಗೆ ಬರಬೇಕಾದ ವಸ್ತುಗಳ ಪಟ್ಟಿಯನ್ನೊಪ್ಪಿಸಿ ಬಂದರು.

ಸುಬ್ಬರಾಯರ ಕಿವಿಗೆ ಈ ಮಾತು ರಂಗಮ್ಮ ಹಾಕಿದಾಗ,

"ಅವರು ಕೇಳುತ್ತಾರೆ; ಎಲ್ಲಾ ತರಿಸಿಕೊಟ್ಟುಬಿಡು. ಒಬ್ಬ ಮಗಳ ಪಾಡು ನೋಡಿದ್ದಾಗಿದೆ. ಇವಳದೂ ಅದೇ ಹಣೇಬರಹ ಬೇಡ" ಎಂದರು.

"ಧಾರಾಳವಾಗಿ ಹೇಳಿಬಿಟ್ಟಿರಲ್ಲಾ. ದುಡ್ಡು."

"ಗಿರಿಯಪ್ಪನವರು ಗಟ್ಟಿಯಾಗಿರುವರೆಗೆ ಏನೂ ಭಯವಿಲ್ಲ."

"ಸುಮ್ಮನೆ ಸಾಲಮಾಡಿದರೆ ಹೇಗೆ. ನಾಳೆ ತೀರಿಸುವ ಬಗೆ?"

"ಇಂಥ ಪೇಚಿನಲ್ಲಿ ಸಿಕ್ಕಿಸಿ ಸಾಲಮಾಡುತ್ತಿರುವ ದೇವರೇ ತೀರಿಸುವ ಹೊಣೆ ಹೊರಬೇಕು."

"ಒಳ್ಳೆ ಚೆನ್ನಾಗಿದೆ. ದೇವರ ಮೇಲೆ ಭಾರಹಾಕಿ ಕೂಡುವ ವಿಷ ಯವೇ ಇದು,"

"ಇನ್ನೇನು ಮಾಡಲಿ ಹೇಳು. ಇಷ್ಟಿಷ್ಟು ದುಡಿಯುತ್ತೇನೆ. ನಾಲ್ಕು ಕಾಸು ಹೆಚ್ಚು ಸಿಕ್ಕಿದರೆ ತಂದುಕೊಡುತ್ತೇನೆ. ಗಿರಿಯಪ್ಪನವರ ಋಣದಲ್ಲಿ ಸಾಯಬೇಕೆಂದು ಇಷ್ಟವಿಲ್ಲ."

ರಂಗಮ್ಮನಿಗೆ ಮುಂದೆ ಏನೂ ತೋರಲಿಲ್ಲ. 'ಹಣ—ಎಷ್ಟು ಅಲ್ಪ ವಿಷಯ. ಆದರೆ ಮಾನವಜೀವನದಲ್ಲಿ ಅದಕ್ಕೆ ಎಂತಹ ಮಹತ್ವ' ಎಂದುಕೊಂಡರು.

ಫಣಿಯಮ್ಮನ ಹಟವೇ ಗೆದ್ದಿತು. ಅವರ ಪಟ್ಟಿಯಲ್ಲಿ ಚಾಚೂ ಕಡಿಮೆಯಾಗಲಿಲ್ಲ. ಪ್ರಸ್ತದ ನೆಪದಲ್ಲಿ ಮಾವನ ಖರ್ಚಿನಲ್ಲಿ ಮತ್ತೆ ಶ್ರೀನಿವಾಸ ಒಂದು ಸರ್ಜ್‌ಸೂಟ್ ಹೊಲಸಿಕೊಂಡ. ಫಣಿಯಮ್ಮ ಧರ್ಮಾವರದ ಶೀರೆ ಗಿಟ್ಟಿಸಿದ್ದಲ್ಲದೆ ಹಿರೀ ಸೊಸೆಗೂ ಒಂದು ಸೀರೆ ಗಿಟ್ಟಿಸಿದರು. ಒಂದು ಸಂಸಾರ ಕೂಡಲೆ ಆರಂಭಿಸಲನುಕೂಲವಾಗುವಷ್ಟು ಪಾತ್ರೆ ಪದಾರ್ಥಗಳ ಸಂಗ್ರಹವಾಯಿತು. ಈ ಗಡಿಬಿಡಿಯಲ್ಲಿ ಸುಬ್ಬರಾಯರು ಒಂದು ತಂದು ಕೊಡುವುದನ್ನು ಮರೆತರು. ಆದರೆ ಫಣಿಯಮ್ಮ ಆ ವಿಷಯ ಮರೆಯಲಿಲ್ಲ.

ಪ್ರಸ್ತದ ಶಾಸ್ತ್ರ ಮುಗಿದ ಮೇಲೆ ಒಂದು ಒಳ್ಳೆಯ ದಿನ ನೋಡಿ ವೆಂಕಟಾಚಲಯ್ಯ ಸೊಸೆಯನ್ನು ಮನೆಗೆ ಬರಮಾಡಿಕೊಂಡರು. ಬೀಗರು ಮಾಡಿಸಿದ ಔತಣದೂಟ ಮುಗಿಸಿಕೊಂಡು ಮನೆಗೆ ಹೊರಡಲು ಸುಬ್ಬರಾಯರು, ರಂಗಮ್ಮ ಗಾಡಿ ಹತ್ತಿದರು. ಇಬ್ಬರನ್ನೂ ಒಂದು ಬಗೆಯ ರುದ್ರ ಮೌನ ಆವರಿಸಿತ್ತು. ರಂಗಮ್ಮ ಆಗಾಗ್ಗೆ ಕಣ್ಣು ಒರಸಿಕೊಳ್ಳುತ್ತಿದ್ದರು.

"ಸುಮ್ಮನೆ ಕಣ್ಣೀರು ಹಾಕಿದರೆ ಏನು ಪ್ರಯೋಜನ ಹೇಳು?"

ರಂಗಮ್ಮ ನೀರವ.

"ಮಗಳನ್ನು ಗಂಡನ ಮನೆಗೆ ಕಳಿಸಿಬಂದು ಕಣ್ಣೀರು ಹಾಕಬಾರದು. ಇದು ಶ್ರೇಯಸ್ಸಲ್ಲ."

"ಅಯ್ಯೋ, ಹಾಗನ್ನಬೇಡೀಂದ್ರೆ. ಕಣ್ಣೀರು ಹಾಕಲ್ಲ."

"ಹುಚ್ಚಿ, ಅದಕ್ಕೇಕಿಷ್ಟು ಗಾಬರಿಯಾಗುತ್ತೀ?"

"ಗೌರನ್ನ ಚೆನ್ನಾಗಿ ನೋಡಿಕೊಳ್ಳುತ್ತಾರೆಯೇಂದ್ರೆ?"

"ನಾನು ಈಗಲೇ ಹೇಗೆ ಹೇಳಲಿ. ನಾಲ್ಕು ದಿವಸ ನೋಡಿದಮೇಲೆ ಗೊತ್ತಾಗಬೇಕು. ಹುಡುಗ ಪ್ರೀತಿಯಾಗಿದ್ದಾನೆ."

"ಪಾಪ, ಅವನದೇನು ನಡೆಯುತ್ತೆ ಮನೆಯಲ್ಲಿ?"

"ಇನ್ನೆಷ್ಟು ದಿವಸ ಹೇಳು. ಅವನಿಗೆ ಕೆಲಸ ಸಿಕ್ಕಿ ಬೇರೆ ಊರಿಗೆ

4

ಹೋದರೆ ಅಚ್ಚುಗಟ್ಟಾದ ಪುಟ್ಟ ಸಂಸಾರ. ಅಲ್ಲಿಗೆ ಬೀಗರು, ಬೀಯಗಿತ್ತಿ ಹೋಗುವಂತಿಲ್ಲ."

"ಗೌರನ್ನ ಅತ್ತೆಯಿಲ್ಲದ ಮನೆ ನೋಡಿ ಕೊಟ್ಟಿದ್ದರೆ ಚೆನ್ನಾಗಿತ್ತೇನೋ ಅನ್ನಿಸತ್ತೆ."

"ಎಲ್ಲಾ ನಮ್ಮ ಮನಸ್ಸಿನ ಹಾಗೇ ಆಗುವಹಾಗಿದ್ದರೆ ಇನ್ನು ನಮ್ಮ ಪುಣ್ಯಕ್ಕೆ ಎಣೆಯೇನು ಹೇಳು."

"ನಿಜ."

ಅಷ್ಟುಹೊತ್ತಿಗೆ ಮನೆ ಸಿಕ್ಕಿತು. ಇಬ್ಬರೂ ಇಳಿದುಹೋದರು. ಅಂದು ಗೌರನಿಲ್ಲದ ಮನೆ ಅವರ ಭಾಗಕ್ಕೆ ಹಾಳುಮನೆಯಾಗಿತ್ತು. 'ಕಣ್ಣೀರು ಹಾಕುವುದಿಲ್ಲ' ಎಂದು ಶಪಥಮಾಡಿದ್ದ ರಂಗಮ್ಮ ಅದನ್ನು ಸಂಪೂರ್ಣವಾಗಿ ಮರೆತುಬಿಟ್ಟರು.

## ೧೧

ಸೀತಾಲಕ್ಷ್ಮಿ ಕಾಹಿಲೆಯಿಂದ ಪೂರ್ಣವಾಗಿ ಚೇತರಿಸಿಕೊಂಡಿದ್ದಳು. ಅವಳ ದೇಹದ ಕಾಹಿಲೆಯನ್ನು ಬೌರಿಂಗ್ ಆಸ್ಪತ್ರೆಯ ನಿಷ್ಣಾತ ಡಾಕ್ಟರರು ಗುಣಪಡಿಸಿದ್ದರು. ಆದರೆ ಅವಳ ಮಾನಸಿಕ ಕಾಹಿಲೆಗೆ ಮದ್ದೇ ಇರಲಿಲ್ಲ. ಮುಖ ಕಂಗೆಟ್ಟುಹೋಗಿತ್ತು. ಮೈ ಎಲುಬಿನ ಹಂದರವಾಗಿತ್ತು. ಉತ್ಸಾಹ, ಸಂತೋಷ ಅವಳ ಬಳಿಗೂ ಸುಳಿಯುವಂತಿರಲಿಲ್ಲ.

ತಂಗಿಯ ಮದುವೆ ಸುದ್ದಿ ಬಂದಾಗ ಒಂದು ದಿನವಾದರೂ ಕಳುಹಿಸಿ ಕೊಡುತ್ತಾರೆಂದು ಸೀತಾ ಗೆಲುವಾದಳು. ಇಲ್ಲದ ಆರೋಗ್ಯವನ್ನು ನಟಿಸದಳು. ಗಂಡನ ಮನಸ್ಸನ್ನು ಒಲಿಸಲು ತನ್ನ ಜಾಣ್ಮೆಯನ್ನೆಲ್ಲಾ ಪ್ರಯೋಗಿಸಿದಳು. ಕೇಶವಯ್ಯ ಖಂಡಿತವಾಗಿ ಹೇಳಿಬಿಟ್ಟ.

"ಮದುವೆಗೆ ಹೋಗೋ ಮಾತು ಬಿಟ್ಟುಬಿಡು. ಆ ಋಣಾನುಬಂಧ ಎಂದೋ ಹರಿದುಹೋಯಿತು."

'ಹರಿದುಹೋಯಿತೇ' ಎಂದು ಸೀತಾ ಯೋಚಿಸಿದಳು. ಹೊಟ್ಟೆಕಟ್ಟಿ, ಬಟ್ಟೆಕಟ್ಟಿ ತನ್ನನ್ನು ಬೆಳಸಿ ದೊಡ್ಡವಳನ್ನಾಗಿಮಾಡಿ ಕೇಶವಯ್ಯನ ಕೈಗೆ ಹಾಕಿದ ತಂದೆತಾಯಿಗಳ ಋಣಾನುಬಂಧ ಹರಿದುಹೋಗಬಲ್ಲುದೇ?

ಮದುವೆಯಲ್ಲಾದ ಹಗರಣ ಕೇಳಿ ಅವಳ ಜೀವ ಹಿಂಡಿಹೋಯಿತು.

" ಅಯ್ಯೋ ನಾನೆಂಥ ಮಗಳು. ತಾಯಿಯ ಬಳಿಯಿದ್ದು ಅವಳಿಗೆ ಒಂದು ಸಮಾಧಾನದ ಮಾತು ಹೇಳುವುದೂ ನನಗೆ ಸಾಧ್ಯವಿಲ್ಲವಲ್ಲಾ" ಎಂದು ಹಲುಬಿದಳು.

ಮದುವೆ ಮುಗಿದಮೇಲೆ ಗಂಡ ಒಂದು ದಿನ ನಗುನಗುತ್ತಿದ್ದುದನ್ನು ಕಂಡಳು. ಕಾಲೇಜಿನ ಮೇಲ್ವಿಚಾರಣೆಗೆ ಬಂದಿದ್ದ ವೈಸ್‌ಚಾನ್ಸಲರ್ ಕೇಶವಯ್ಯನ ಬಗ್ಗೆ ಒಂದೆರಡು ಒಳ್ಳೆಯ ಮಾತುಗಳನ್ನು ಅವನ 'ಸರ್ವಿಸ್ ರಿಜಿಸ್ಟರ್'ನಲ್ಲಿ ಬರೆದಿದ್ದರು. ಕೇಶವಯ್ಯ ಅದನ್ನು ನೋಡಿ ಹಿಗ್ಗಿ ಹೋಗಿದ್ದ. ಹೆಂಡತಿಯ ಮುಂದೆ ತನ್ನ ಪ್ರಾಶಸ್ತ್ಯ ಹೇಳಿಕೊಳ್ಳುವುದಕ್ಕೆ ಅವನಿಗೆ ಒಳ್ಳೆಯ ಅವಕಾಶ ಸಿಕ್ಕಿದಂತಾಯಿತು.

ಸೀತೆ ಕೊಟ್ಟ ಶಂಕರಪೋಳಿ ತಿಂದು ಕಾಫಿ ಕುಡಿದು ತೃಪ್ತಿಯಿಂದ ಹೇಳಿದ.

" ಸೀತಾ—ನಿಮ್ಮಪ್ಪ ನನ್ನ ಕೈಲಾಗದೋನು ಎಂದು ಭಾವಿಸಿಕೊಂಡಿದ್ದಾನಲ್ಲವೇ "

" ಅವರು ಎಂದು ಆ ಮಾತನ್ನಾಡಿದರು. "

" ಆಡಬೇಬೇಕೇ ? ನಡತೆಯಲ್ಲಿ ಗೊತ್ತಾಗಲ್ವೇ ? "

" ನಿಜವಾಗಿ ಹೇಳೀಂದ್ರೆ. ಸುಮ್ಮನೆ ಅವರನ್ನೇಕೆ ಆಕ್ಷೇಪಿಸುತ್ತೀರಿ. ನಿಮ್ಮ ವಿಚಾರದಲ್ಲಿ ಅವರು ಯಾವಾಗ ತಾತ್ಸಾರ ತೋರಿಸಿದರು—ಮರ್ಯಾದೆ ಬಿಟ್ಟು ನಡೆದುಕೊಂಡರು. "

" ಇನ್ನೇನಾಗಬೇಕು — ಮದುವೆಯಲ್ಲಿ ಮಾಡಿದ ಮರ್ಯಾದೆ ಸಾಲದೇ."

" ಸಲಸಲಕ್ಕೂ ಅದನ್ನೇ ಆಡುತ್ತೀರಿ, ಅವರು ಕೊಡೋದೆಷ್ಟು, ಬಿಡೋದೆಷ್ಟು ? "

"ಹೌದುಹೌದು, ತಂದೆ ವಕೀಲಿ ನೀನು ವಾದಿಸದಿದ್ದರೆ ಇನ್ನು ಯಾರು ಮಾಡಬೇಕು ಹೇಳು. "

" ಹೋಗಲಿ. ಹಳೇ ವ್ಯಾಜ್ಯ ಬೇಡ. ನನ್ನೇಕೆ ಕರೆದಿರಿ. "

" ವೈಸ್‌ಚಾನ್ಸಲರ್ ಇವತ್ತು ನನ್ನ ಪಾಠಕ್ಕೆ ಬೆರಗಾಗಿ ಹೋದರು.

ಸರ್ವೀಸ್ ರಿಜಿಸ್ಟರಿನಲ್ಲಿ ಸೊಗಸಾಗಿ ಬರೆದು ಹೋಗಿದ್ದಾರೆ. ಇನ್ನು ೫-೬ ತಿಂಗಳಿಗೆ ನಾನು ಅಸಿಸ್ಟೆಂಟ್ ಪ್ರೊಫೆಸರ್."

"ತುಂಬ ಸಂತೋಷ."

"ಎಷ್ಟು ನೀರಸವಾಗಿ ಅಂತೀಯೋ ಆ ಮಾತನ್ನ."

"ಇನ್ನು ಹೇಗೆ ಹೇಳಲೀಂದ್ರೆ. ನೀವು ಅಸಿಸ್ಟೆಂಟ್ ಪ್ರೊಫೆಸರ್,—ಪ್ರೊಫೆಸರ್ ಆದರೆ ನನಗೆ ಸಂತೋಷವಿಲ್ಲವೇ?"

"ನಡೀ ಬೇಗ ಬಟ್ಟೆ ಹಾಕಿಕೊ—ಸೊಗಸಾದ ಸಿನೀಮಾಇದೆ ಹೋಗಿ ಬರೋಣ."

"ಆಗಬಹುದು. ಈಗಲೇ ಒಂದು ಮಾತು ಕೇಳಿಬಿಡುತ್ತೇನೆ."

"ಕೇಳು."

"ನೀವು ಅಸಮಾಧಾನಮಾಡಿಕೊಳ್ಳುವುದಿಲ್ಲವೆಂದು ಮಾತುಗೊಟ್ಟರೆ ಹೇಳುತ್ತೇನೆ."

"ಅಸಮಾಧಾನವುಂಟುಮಾಡುವ ವಿಷಯವಾಗಿರದಿದ್ದರೆ ಖಂಡಿತ ಅಸಮಾಧಾನಮಾಡಿಕೊಳ್ಳುವುದಿಲ್ಲ."

"ಹೋಗಿ ಹಾಗಾದರೆ ನಾನು ಹೇಳುವುದೇ ಇಲ್ಲ."

"ಇಲ್ಲ ಹೇಳು ಅಸಮಾಧಾನಮಾಡಿಕೊಳ್ಳುವುದಿಲ್ಲ."

"ಖಂಡಿತವೋ?"

"ಖಂಡಿತ."

"ಗೌರನ ಮದುವೆಗೆ ಹೋಗಬೇಡವೆಂದಿರಿ. ನಾನು ಹೋಗಲಿಲ್ಲ."

"ಒಳ್ಳೆಯದಾಯಿತು."

ಒಂದು ದಿನ ಅವಳನ್ನೂ ಅವಳ ಗಂಡನನ್ನೂ ಮನೆಗೆ ಕರೆದುಕೊಂಡು ಬರುತ್ತೀರಾ. ಇಲ್ಲೇ ಅವರಿಬ್ಬರನ್ನು ಕಣ್ತುಂಬ ನೋಡಿ ಹರಸುತ್ತೇನೆ."

"ಯೋಚನೆ ಮಾಡೋಣ. ಸಿನಿಮಾಗೆ ಹೊತ್ತಾಗತ್ತೆ ಏಳು. ಸೀರೆ ಉಟ್ಟುಕೋ."

"ಕರೆದುಕೊಂಡು ಬರುವುದಕ್ಕೆ ನೀವು ಒಪ್ಪಿದರೆ—"

"ಕರೆದುಕೊಂಡು ಬರುತ್ತೇನೆ. ಆದರೆ ನಿನ್ನ ಅಮ್ಮ ಅಪ್ಪನ್ನ ಕರೆಯಲ್ಲ ಆಗಬಹುದೋ?"

“ ನಿಮ್ಮ ಇಷ್ಟ. ”

ಒಂದರೆಕ್ಷಣದಲ್ಲಿ ಸೀತಮ್ಮ ಅಲಂಕರಿಸಿಕೊಂಡು ಬಂದಳು. ಅವಳ ಮನಸ್ಸು ಯಾವುದೋ ಅವ್ಯಕ್ತಾನಂದದಿಂದ ತುಂಬಿಹೋಯಿತು. ಮನಸ್ಸಿನಲ್ಲಿಯೇ ಗಂಡನಿಗೆ ನೂರು ಬಾರಿ ವಂದಿಸಿದಳು. ಅವನ ಒಂದು ಒಳ್ಳೆಯ ಮಾತು ಅವಳೆಲ್ಲ ನೋವು, ದುಃಖ, ಚಿಂತೆಗಳನ್ನು ದೂರಮಾಡಿತ್ತು. ದಯೆಗೆ ಮಾರ್ದನಿಗೊಟ್ಟ ಹೆಣ್ಣು ಜೀವ ಹಕ್ಕಿಯಂತೆ ಹಿಗ್ಗಿತು. ಹೆಂಡತಿಯ ಮುಖದಲ್ಲಿ ಮೂಡಿದ್ದ ರಾಗಸಿರಿಯನ್ನು ಕೇಶವಮೂರ್ತಿ ಗಮನಿಸಲಿಲ್ಲ.

ಸಿನೀಮಾಕ್ಕೆ ಹೋದರೆ ಕೇಶವಮೂರ್ತಿ ಸಾಧಾರಣವಾಗಿ ಕೆಳಗಿನ ದರ್ಜೆಯಲ್ಲಿ ಹೋಗಿ ಕೂಡುತ್ತಿರಲಿಲ್ಲ. ತಾನು ಕಾಲೇಜಿನಲ್ಲಿ ದೊಡ್ಡ ಪ್ರೊಫೆಸರು. ಕೆಳಗಿನ ದರ್ಜೆಯಲ್ಲಿ ಬೀಡಿ ಚುಟ್ಟ ಸೇದುವವರೊಂದಿಗೆ ಹೋಗಿ ಕೂಡುವುದೇ ಎಂದವನ ತರ್ಕ. ಕೈಯಲ್ಲಿ ಕಾಸಿಲ್ಲದಿದ್ದರೂ ಸಾಲ ಮಾಡಿಯಾದರೂ ೧–೧೦–೦ ಸೀಟಿಗೆ ಹೋದಾನೆ ವಿನಾ ಕೆಳದರ್ಜೆಯ ಸೀಟುಗಳಿಗೆ ಹೋಗುತ್ತಿರಲಿಲ್ಲ.

ಪ್ರಭಾತ ಮಂದಿರದಲ್ಲಿ ‘ಡಾ॥ಕೋಟ್ನಿಸ್’ ಚಿತ್ರ ನಡೆಯುತ್ತಿತ್ತು. ವಿಪರೀತ ಗದ್ದಲ. ಕೇಶವಮೂರ್ತಿ ೨–೪–೦ ಟೀಕೀಟುಗಳನ್ನು ಕೊಳ್ಳಬೇಕಾಗಿಬಂತು. ಸೀತಾ ಅದನ್ನು ನೋಡಿ ಒಳಗೆ ಕುಳಿತಾಗ ಹೇಳಿದಳು.

“ ಏನೂ ಅಂದ್ರೆ ಅನ್ಯಾಯ. ಒಂದು ಸಿನಿಮಾ ನೋಡುವುದಕ್ಕೆ ಆರೇಳು ರೂಪಾಯಿ ಖರ್ಚುಮಾಡಬೇಕೆ ? ”

“ ಮಂಕೇ—ಇದೇನು ದೊಡ್ಡ ವಿಷಯ. ಕಾಲೇಜ್ ಕಾಮನ್ ರೂಮಿನಲ್ಲಿ ಇತರ ಉಪಾಧ್ಯಾಯರು ನನ್ನ ಪ್ರಶಂಸೆ ಮಾಡುವುದನ್ನು ನೀನು ಕೇಳಬೇಕು. ‘ನಿಮ್ಮ ಟೇಸ್ಟ್ ಯಾರಿಗೂ ಇಲ್ಲ ಕೇಶವಮೂರ್ತಿ’ ಎಂದೆಲ್ಲ ಮೆಚ್ಚುತ್ತಾರೆ. ”

“ಮೆಚ್ಚದೆ ಏನು ಮಾಡುತಾರೆ. ನಿಮ್ಮನ್ನು ಹೊಗಳಿ ಅವರು ಬಿಟ್ಟಿ ತಿಂಡಿ ಕಾಫಿ ಗಿಟ್ಟಿಸುವಾಗ.”

“ಹೋಗಲಿ ಬಿಡು. ಖರ್ಚು ಮಾಡುವವರಿಗೇ ದೇವರು ಹಣ ಕೊಡುವುದು.”

" ನಮ್ಮ ಸ್ಥಿತಿ ನೋಡಿಕೊಂಡು ಖರ್ಚುಮಾಡಬೇಡವೇ. ಮೊನ್ನೆ ನನ್ನ ಕಾಹಿಲೆಗೇ ಸಿಕ್ಕಾಪಟ್ಟೆ ಖರ್ಚಾಯಿತು."

" ನಾನು ಯಾವಾಗಲೂ ಮೀನ್(mean)ಅಲ್ಲ ಸೀತಾ. "

" ಹಾಗಾದರೆ ಮೊಸಳೇನೇನೋ ? "

ಇಬ್ಬರೂ ನಕ್ಕರು. ಕೇಶವ ಹೇಳಿದ "ನಿನಗೆ ಒಂದು ವಿಚಿತ್ರ sense of humour ಇದೆ ಕಣೇ. "

"ಅದನ್ನು ಈಗಲಾದರೂ ಕಂಡುಕೊಂಡಿರಲ್ಲಾ ? "

" ನಾನು ಯಾವಾಗಲೇ ಕಂಡುಕೊಳ್ಳದೆ ಇದ್ದದ್ದು."

" ಹೋಗಲಿ ಬಿಡಿ. ಸಿನೀಮಾ ಷುರುವಾಯಿತು."

ಸಿನೀಮಾ ಮುಗಿಯುವ ತನಕ ತಲೆದೋರದಿದ್ದ ಯೋಚನೆ ಮುಗಿದ ಕೂಡಲೆ ಪ್ರಾಪ್ತವಾಯಿತು. ಕೇಶವಯ್ಯ ಕೇಳಿದ

" ಊಟದ ಯೋಚನೇನೆ ಬಿಟ್ಟು ಕೂತೆವಲ್ಲಾ. ಈಗ ಊಟ? "

" ಎಷ್ಟು ಹೊತ್ತು, ಅರ್ಧ ಗಂಟೆಯಲ್ಲಿ ಅನ್ನ ಸಾರು ಮಾಡುತ್ತೇನೆ. "

" ಬೇಡ, ಇಷ್ಟು ಹೊತ್ತಿನ ಮೇಲೆ ಮನೆಗೆ ಹೋಗಿ ಒಲೆ ಹಚ್ಚುವುದೇಕೆ "

" ಹಾಗಾದರೆ. "

" ಇಲ್ಲಿ ಎನ್. ಎಂ. ಸಿ. ಯಲ್ಲಿ (ನಿಯೋ ಮೈಸೂರು ಕೆಫೆ) ಊಟ ಮುಗಿಸಿಕೊಂಡೇ ಹೊರಟುಹೋಗೋಣ. "

" ಆಗಬಹುದು. "

ಎಂದಳು. ಇಬ್ಬರೂ ಹೋಟಲಿಗೆ ಬಂದು ಊಟಕ್ಕೆ ಕುಳಿತರು.

"ಸಿನೀಮಾ ಹೇಗಿತ್ತು ? "

" ತುಂಬ ಚೆನ್ನಾಗಿತ್ತು. ?

" ಸಿನೀಮಾ ನೋಡುತ್ತ ಸುಮ್ಮನೆ ಅಳುತ್ತಾರೆಯೇ ? "

" ಅಳು ಬಂದರೆ ಏನುಮಾಡಬೇಕು. "

" ಸಿನೀಮಾ ಕಥೆ ಕಟ್ಟುಕಥೆ ಅಂತ ಗೊತ್ತು. ಆವರೂ ಅಳುವುದೇಕೆ?"

" ಅದನ್ನು ನೋಡುವಾಗ ಹಾಗೆ ಅನ್ನಿಸಲ್ಲವಲ್ಲಾ. "

"ಅಂಥ ಆದರ್ಶಪ್ರೇಮ ನಿಜವಾಗಿಯೂ ಸಾಧ್ಯವೇ ಎಂದು ಯೋಚಿಸ್ತಿದ್ದೆ"

"ಸಾಧ್ಯವಿಲ್ಲವೇ ?"

"ಕಾವ್ಯಗಳಲ್ಲಿ ಸಾಧ್ಯ. ಡಾಂಟೆಯ ಬಿಯಾಟ್ರಿಸ್, ಷೇಕ್ಸ್‌ಪಿಯರನ ಜೂಲಿಯಟ್, ಕಾಳಿದಾಸನ ಶಾಕುಂತಲ ಅಂಥ ಆದರ್ಶವ್ಯಕ್ತಿಗಳನ್ನು ಚಿತ್ರಿಸಿವೆ. ಆದರೆ ನಿಜಜೀವನದಲ್ಲಿ ಅದು ಸಾಧ್ಯವೇ—ಸಂಭವವೆ ?"

"ಜೀವನ ಸಾಗಿಸುವ ಜನಕ್ಕೆಲ್ಲಾ ಡಾಂಟೆ, ಷೇಕ್ಸ್‌ಪಿಯರ್, ಕಾಳಿದಾಸರ ಕಣ್ಣುಗಳಿದ್ದರೆ ಅಂಥ ವ್ಯಕ್ತಿಗಳನ್ನು ಅವರೂ ನೋಡಬಲ್ಲರು."

"ಆದರ್ಶ ನೋಡುವವರ ಕಣ್ಣಲ್ಲಿಯೇ ವಿನಾ ಇರುವವರ ಜೀವನದಲ್ಲಿಲ್ಲ."

"ಜೀವನ ನೋಡದೆ ಡಾಂಟೆ, ಷೇಕ್ಸ್‌ಪಿಯರ್, ಕಾಳಿದಾಸ ಅಂಥ ಪಾತ್ರಗಳನ್ನು ಸೃಷ್ಟಿಸಿದರೇನು ?"

"ಇಲ್ಲ. ಸತ್ಯ ಒಂದಂಶವಿದೆ. ಅದರ ಜತೆ ಕವಿಕಲ್ಪನೆ ತೊಂಬತ್ತೊಂಬತ್ತು ಅಂಶ ಸೇರಿಕೊಂಡಿದೆ."

"ನೀವು ಪ್ರಮಾಣ ಸ್ವಲ್ಪ ತಿರುಗಮುರಗ ಮಾಡಿದಿರಿ. ಲೋಕದಲ್ಲಿ ಆದರ್ಶಜೀವನ ನಡೆಸುವ ನೂರಾರು—ಸಾವಿರಾರು ಜನ ಇದ್ದಾರೆ. ಆದರೆ ಅದನ್ನು ತಿಳಿದುಕೊಳ್ಳುವ ಜನ ಕಡಿಮೆ. ಹಿತ್ತಲ ಗಿಡ ಮದ್ದಲ್ಲ ಅನ್ನೋ ಗಾದೆ ಹೇಳಿದಹಾಗೆ.'

"ಪಲ್ಯಕ್ಕೆ ಉಪ್ಪು ಸ್ವಲ್ಪ ಹೆಚ್ಚಲ್ಲವೇ ?"

"ಹೂ !"

ಎನ್ನುತ್ತಾ ಸೀತಾ ನಕ್ಕಳು.

ಊಟ ಮುಗಿಸಿಕೊಂಡು ಒಂದು ಗಾಡಿ ಗೊತ್ತುಮಾಡಿಕೊಂಡು ಮನೆಗೆ ಹೊರಟರು. ಗಾಡಿ ಹೊಡೆಯುವ ಸಾಬಿ ತೀರ ಮುದುಕ. ಆ ವೃದ್ಧಾಪ್ಯದಲ್ಲಿ ಅವನು ಸುಖವಾಗಿ ಮನೆಯಲ್ಲಿ ಕುಳಿತು ಮಕ್ಕಳು ಸಂಪಾದಿಸಿ ಹಾಕಿದುದನ್ನು ತಿಂದುಕೊಂಡಿರಬಹುದಾಗಿತ್ತು. ಕೇಶವಯ್ಯ ಅವನೊಂದಿಗೆ ಹರಟೆ ಆರಂಭಿಸಿದ

" ಇಷ್ಟು ವಯಸ್ಸಾಗಿ ನೀನೇ ಗಾಡಿಹೊಡೀತೀಯಲ್ಲಾ ಸಾಬೂ."

" ಏನು ಮಾಡಲಿ ಸಾಮಿ—ಪೇಟ್ ಕೇಳಬೇಕಲ್ಲ,"

" ನಿನಗೆ ಮಕ್ಕಳಿಲ್ಲವೇ ? "

" ಇದಾರೆ. ಎಲ್ಲಾ ಚಿಕ್ಕೋರು. ಬೀಬಿ ತೀರಿಕೊಂಡಳು."

" ನಿನ್ನ ಮನೆ ಯಾರು ನೋಡಿಕೊಳ್ಳುತ್ತಾರೆ."

" ಬೆಳಿಗ್ಗಿಯಿಂದ ನಾಲ್ಕುಗಂಟೆವರೆಗೆ ನಾನೇ ಎಲ್ಲಾ ಮಾಡ್ತೀನೆ ಮಾರಾಜ. ಆಮೇಲೆ ಗಾಡಿ ಕಟ್ತೀನಿ."

" ಇನ್ನೊಂದು ಮದುವೆ ಮಾಡ್ಕೊಳ್ಳಿಲ್ಲವೇ ? "

" ಎಂಗಾಗತ್ತೆ ಸಾಮಿ. ಬೀಬಿ ಲಸ್ಮಿ ಇದ್ದಾಗಿದ್ದಳು. ಅವಳು ಓದ ಳೂಂತ ಬೇರೆ ಷಾದಿ ಮಾಡಿಕೊಂಡರೆ ಪರವರ್ದಿಗಾರ್ ಒಪ್ತಾನಾ ಬುದ್ದಿ."

ಸೀತಾ ಸಂಭಾಷಣೆ ಕೇಳುತ್ತಿದ್ದವಳು

" ಜೀವನದಲ್ಲಿ ಆದರ್ಶವಿಲ್ಲ ಎಂದಿರಲ್ಲ. ನೋಡಿದರಾ ಗಾಡಿಯವನ ಆದರ್ಶ."

" ನಿನ್ನ ಕಣ್ಣಿಗೆಲ್ಲಾ ಆದರ್ಶವೇ ? "

ಎಂದು ಕೇಶವಮೂರ್ತಿ ಮೂದಲಿಸಿದ.

ಮನೆ ತಲುಪುವ ಹೊತ್ತಿಗೆ ರಾತ್ರಿ ಹನ್ನೊಂದು ಗಂಟೆ ಹೊಡೆದಿತ್ತು. ಪದ್ಧತಿಯಂತೆ ಕೇಶವಮೂರ್ತಿ ಪುಸ್ತಕ ಹಿಡಿದು ಕುಳಿತ. ಸೀತಾ ಬಟ್ಟೆ ಬದಲಾಯಿಸಿಕೊಂಡು ಬಂದು ಮೆಲ್ಲನೆ ಗಂಡನ ಬಳಿ ನಿಂತು ಅವನ ಕ್ರಾಪಿನ ಸುಳಿಯ ಮೇಲೆ ಬೆರಳಾಡಿಸತೊಡಗಿದಳು.

"ಸ್ವಲ್ಪ ಸುಮ್ಮನಿರು. ಪುಸ್ತಕ ಮುಗಿಸಬೇಕಾಗಿದೆ."

"ಓದಿಓದಿ ಮರುಳಾದ ಕೂಚುಭಟ್ಟ."

"ಸೀತಾ, ನೀನು ಹೋಗಿ ಮಲಗಿಕೋ."

ಕುರ್ಚಿಯ ಕೈಮೇಲೆ ಕುಳಿತುಕೊಂಡು " ನನಗೂ ನಿದ್ದೆ ಹತ್ತುತ್ತಿಲ್ಲ. ನೀವು ಓದಿ ಮುಗಿಸಿ. ಆಮೇಲೆ ಮಲಗಿದರಾಯಿತು."

"ನೀನು ಎದುರಿಗೆ ಕುಳಿತು ಜಪಿಸುತ್ತಿದ್ದರೆ ನನ್ನ ಓದು ಹೇಗೆ ಸಾಗತ್ತೇ?"

"ಅದಕ್ಕೇ ನಾನು ಹೇಳಿದ್ದು ಪುಸ್ತಕ ಮುಚ್ಚಿಟ್ಟು ಬಂದು ಮಲಗಿಕೊಳ್ಳಿ. ಬೆಳಿಗ್ಗೆ ಬೇಗ ಎದ್ದು ಪಾಠಾನ ಉರು ಹೊಡೆಯುವಿರಂತೆ."

ಅವನ ಕೈಯಿಂದ ಪುಸ್ತಕ ಕಿತ್ತುಕೊಂಡು ಮುಚ್ಚಿಟ್ಟಳು. ದೀಪ ಆರಿಸಿದಳು.

ಹಾಸಿಗೆಯ ಮೇಲೆ ಮಲಗಿದಾನಂತರ ಸೀತಾ ಸಣ್ಣ ಧ್ವನಿಯಲ್ಲಿ

"ಏನೂಂದರೆ........"

"ಏನೂಂದರೆ........"

"ನಾನು ಹೇಳಿದ್ದು ಏನುಮಾಡುತ್ತೀರಿ?"

"ಯಾವ ವಿಷಯ?"

"ಇಷ್ಟುಬೇಗ ಮರೆತು ಹೋಯಿತೇನು?"

"ನೀನು ಹೇಳಿದ್ದು ಜ್ಞಾಪಕವಿದೆ. ವಿಷಯ ಮರೆತುಹೋಯಿತು. ಅಷ್ಟೇ."

"ಅದೇ—ಗೌರನ್ನ ಅವಳ ಗಂಡನ್ನ ಕರೆದುಕೊಂಡು ಬರೋ ವಿಷಯ."

"ಯೋಚನೆಮಾಡೋಣ ಎಂತ ಹೇಳಿದೆನಲ್ಲಾ."

"ಯೋಚನೆ ಬಗೆ ಹರಿಯೋದೇ ಇಲ್ಲ."

"ಹರಿಯತ್ತೆ. ಕರ್ಕೊಂಡುಬರ್ತೀನಿ ಸುಮ್ನಿರು."

"ಅವರಿಗೆ ನಾವು ಏನಾದರೂ ಕೊಡಬೇಡವೇ?"

"ಉಡುಗೊರೆಯೇ?"

"ಹೂ. ಮದುವೆಯಲ್ಲೂ ಏನೂ ಕೊಡಲಿಲ್ಲ."

"ನಿನಗೆ ಏನುಬೇಕೋ ಕೊಡು. ನನ್ನ ಅಭ್ಯಂತರವೇನೂ ಇಲ್ಲ."

"ನೀವು ಎಲ್ಲಾ ಸರಿಯಂದ್ರೆ. ಆದರೆ ಸ್ವಲ್ಪ...."

"ವಕ್ರ ಅಂದುಬಿಡು."

"ನೀವು ತಿಳ್ಕೊಂಡಿರುವಾಗ ನಾನು ಬಾಯಿಬಿಟ್ಟು ಏಕೆ ಹೇಳಲಿ."

"ಸೀತಾ, ಈಗ ಟಾನಿಕ್ ತೆಗೆದುಕೊಂಡೆಯಾ?"

"ಮರೆತುಬಿಟ್ಟೆನಲ್ಲಾ."

"ಏಳು ಏಳು—ಕುಡಿದು ಮಲಗಿಕೋ?"

"ಒಂದು ದಿನ ಇಲ್ಲದಿದ್ದರೇನು? ಬೆಳಿಗ್ಗೆ ತೆಗೆದುಕೊಂಡಿದ್ದೇನಲ್ಲಾ."

" ಬೆಳಿಗ್ಗೆಯಂತೆ ಬೆಳಿಗ್ಗೆ---ಸುಮ್ಮನೆ ಏಳು. ಮುಖ ಬಿಳಿಚಿಕೊಂಡು ಹೋಗುತ್ತಿದೆ. ಔಷಧ ಕುಡಿಯುವುದಕ್ಕೆ ಕಳ್ಳ ಬೀಳುತ್ತಾಳೆ."

ನಿರ್ವಾಹವಿಲ್ಲದೆ ಸೀತಾ ಎದ್ದು ಮುಖ ಸಿಂಡರಿಸಿಕೊಂಡು 'ಮೆಟಾಟೋನ್' ಕುಡಿದು ಮಲಗಿದಳು.

" ಹಾಳು ಹೆಂಡದ ವಾಸನೆ. "

" ಸ್ವಲ್ಪ ಆಲ್ಕೋಹಾಲ್ ಹಾಕಿರುತ್ತಾರೆ. ಇದು ತೆಗೆದುಕೊಂಡ ಮೇಲೆ ನಿನಗೆಷ್ಟೋ ಗುಣವಾಯಿತಲ್ಲವೇ? "

" ಈ ಟಾನಿಕ್‌ನಿಂದ ಏನಾಗತ್ತೆ ಹೇಳಿ? ನೀವು ಒಂದು ಪ್ರೀತಿ ಮಾತಾಡಿದರೆ ಅದರ ಸಮಾನ ಟಾನಿಕ್ ಇದೆಯೇ " ಎಂದಳು.

ಕೇಶವಯ್ಯ ಅವಳನ್ನು ಅಪ್ಪಿದ.

೧೨

ಫಣಿಯಮ್ಮ ಸೊಸೆಯರಿಬ್ಬರಿಗೂ ಕೆಲಸ ಹಂಚಿ ತಾವು ನಿರಾತಂಕವಾಗಿ ಕುಳಿತರು. ಬೆಳಿಗ್ಗೆ ಸುಶೀಲಾ, ರಾತ್ರಿ ಗೌರಿ ಅಡಿಗೆಮಾಡಬೇಕೆಂದು ವಿಧಾಯಕವಾಗಿತ್ತು.

ಸುಶೀಲಾ ಅತ್ತೆಯ ಕೈಯಲ್ಲಿ ಕೆಲವು ವರ್ಷಗಳಿಂದ ಸುರುಗಿ ಅವರ ಅಭಿರುಚಿಯನ್ನು ಚೆನ್ನಾಗಿ ತಿಳಿದುಕೊಂಡಿದ್ದಳು. ಗೌರನಿಗೆ ಮನೆ, ಕೆಲಸ, ಜನ ಎಲ್ಲಾ ಹೊಸದು. ಸುಶೀಲ ವಾರಗಿತ್ತಿಯ ನೆರವಿಗೆ ಬಂದು ಅವಳಿಗೆ ಶಿಕ್ಷಣ ಕೊಡುತ್ತಿದ್ದಳು.

ಇಲ್ಲದ ನೆಪಮಾಡಿಕೊಂಡು ಸೊಸೆಯರನ್ನು ಹಳಿಯುವುದು, ಹೀಯಾಳಿಸುವುದು ಫಣಿಯಮ್ಮನ ಸ್ವಭಾವವಾಗಿತ್ತು. ಅತ್ತೆಯ ಬಿರುಸು ಮಾತು ಕೇಳಿ ಗೌರ ಕಣ್ಣೀರು ಹಾಕುತ್ತಿದ್ದಳು. ಗೌರನ ಕೋಮಲಸ್ವಭಾವ ನೋಡಿ ಒಮ್ಮೊಮ್ಮೆ ಸುಶೀಲ ನಗುತ್ತಿದ್ದಳು.

" ನೀನು ಇಷ್ಟು ಪೆಚ್ಚಾದರೆ ಅತ್ತೆಯ ಕೈಕೆಳಗೆ ಬಾಳಿದ ಹಾಗೇನೇ?"

" ಏನುಮಾಡಲಿ ಅಕ್ಕಾ. ಅತ್ತೆ ಸುಮ್ಮಸುಮ್ಮನೆ ಕೋಪಮಾಡಿಕೊಳ್ಳುತ್ತಾರೆ."

"ಬೊಗಳೋನಾಯಿ ಬಾಯಿಮುಚ್ಚುವುದಕಾಗತ್ತ್ಯೇನೇ, ಗೌರಾ."

" ನೋಡಿಯಕ್ಕ. ನಿನ್ನೆ ದೇವರ ದೀಪ ಸರಿಯಾಗಿ ತೊಳೆದಿಲ್ಲಾಂತ ರಾದ್ಧಾಂತ ಮಾಡಿದರು. ಇವತ್ತು ಹುಣಿಸೇಹಣ್ಣು ಹಾಕಿ ತೊಳೆಯುತ್ತ ಕುಳಿತಿದ್ದರೆ 'ತಿಕ್ಕು ತಿಕ್ಕು, ಮೂರುದಿವಸಕ್ಕೆ ಹೊಸ ನಂದಾದೀಪ ಹಾಳಾಗಿ ಹೋಗಲಿ. ಯಾರಪ್ಪನ ಮನೆ ಗಂಟು ಹೇಳು' ಎಂದರು. ಹೀಗಾದರೆ ಹೇಗೆ ಕೆಲಸಮಾಡಿ ಪೂರೈಸುವುದು."

' ನನ್ನ ಮಾತು ಕೇಳು ಗೌರ. ಅವರು ಬೇಕಾದ್ದು ಅಂದುಕೊಳ್ಳಲಿ. ಮನಸ್ಸಿಗೆ ಹಚ್ಚಿಕೊಳ್ಳಬೇಡ. ಅಂದು ಅಂದು ಬಾಯಿ ನೋಯಿಸಿಕೊಂಡು ಅವರೇ ತೆಪ್ಪಗಾಗುತ್ತಾರೆ."

" ಅಕ್ಕಾ—ನನ್ನದು ತಪ್ಪಾಗುತ್ತಿದ್ದರೆ ನೀವು ತಿದ್ದಿ. ನನಗೇನೂ ಬರೋದಿಲ್ಲ. ನೀವು ಹೇಳಿಕೊಟ್ಟರೆ ಕಲಿತುಕೊಳ್ಳುತ್ತೇನೆ."

" ಈ ಮನೆಗೆ ಬಂದಾಗ ನಾನು ಪಟ್ಟಪಾಡು ನೀನು ಕಾಣೆ ಗೌರ. ನಿಮ್ಮ ತಾಯಿ ಜಾಣರು. ಎಲ್ಲಾ ಕೆಲಸ, ಅಡಿಗೆ ನಿನಗೆ ಹೇಳಿಕೊಟ್ಟಿದ್ದಾರೆ. ನನ್ನ ಮನೆಯಲ್ಲಿ ಮುದ್ದಿನಿಂದ ಸಾಕಿದರು. ಒಂದು ಉಪಕರಣೆ ತೊಳೆಯುವುದಕ್ಕೂ ಬರುತ್ತಿರಲಿಲ್ಲ, ಈ ಹುಲಿಯತ್ತೆ ಹುರಿದು ಮುಕ್ಕಿಬಿಟ್ಟಳು. ನಾನೂ ನಿನ್ನ ಹಾಗೆ ದಿನಾ ಕೂತುಕೊಂಡು ಅಳುತ್ತಿದ್ದೆ. ಆಮೇಲೆ ಅತ್ತೆ ಬಿರುಸು ಮಾತು ರೂಢಿಯಾಗಿ ಅಳುವುದನ್ನು ಬಿಟ್ಟೆ."

" ಸೊಸೆಯರನ್ನು ಕಾಡದೆ ಇದ್ದರೆ ಅತ್ತೇತನಕ್ಕೆ ಕುಂದೇ ಅಕ್ಕಾ."

" ಈ ಮುದಿಮೂಳೆಯರ ಹಣೆಬರಹವೇ ಅಷ್ಟು ಬಿಡು. ಕಂಡವರ ಮನೆ ಹೆಣ್ಣುಮಕ್ಕಳನ್ನು ಕೊರಗಿಸಿ ಸಾಯಿಸುವುದು. ಇವರಿಗೆಲ್ಲಾ ಒಂದು ಪ್ರತ್ಯೇಕ ನರಕ ಸೃಷ್ಟಿಯಾಗಿದೆ."

" ಹೋಗಲಿ ಬಿಡಿ ಅಕ್ಕ. ಎಲ್ಲಾದರೂ ಅತ್ತೇ ಕೇಳಿಸಿಕೊಂಡಾರು."

" ಇಲ್ಲ. ತುಳಸೀಕಟ್ಟೆ ಸುತ್ತುತ್ತಿದ್ದಾರೆ. ಮಾಡೋದು ಅನಾಚಾರ, ಮನೆಮುಂದೆ ಬೃಂದಾವನ. ಇವರಿಗೆ ತುಳಸೀಪೂಜೆ ಒಂದು ಕೇಡು."

" ಅಕ್ಕಾ, ನನಗೊಂದು ಉಪಕಾರಮಾಡುತ್ತೀರಾ ? "

" ಹೇಳಮ್ಮ. ಏನದು ? "

" ನಿಮ್ಮ ಯಜಮಾನರಿಗೆ ಹೇಳಿ ಏನಾದರೂ ಮಾಡಿ ಅವರನ್ನು ಲಾ ಪರೀಕ್ಷೆಗೆ ಕಳಿಸುವಂತೆ ಮಾಡಿ."

"ಅಯ್ಯೋ ಹುಚ್ಚಿ. ಅತ್ತೆ ಖಜಾನೆಗೆ ಹೋದ ಹಣ ಸ್ಮಶಾನಕ್ಕೆ ಹೋದ ಹೆಣ ಎರಡೂ ಒಂದೇ. ಅವು ತಿರುಗಿ ಹೊರಗೆ ಬರುತ್ತವೆಯೇ? ಖರ್ಚಿನ ಬಾಬತು ಯಾರು ಹೇಳಿದರೂ ಹೂ ಎನ್ನುವುದಿಲ್ಲ."

"ನಿಮ್ಮ ಯಜಮಾನರು ಹೇಳಿದರೆ?"

"ಅವರು ಹೇಳಿದರೂ ಅಷ್ಟೇ. ಅವರು ಪಡುತ್ತಿರುವ ಸುಖ ನೀನೇ ನೋಡುತ್ತಾ ಇದ್ದೀಯಲ್ಲಾ."

"ಈಗಲೇ ಅವರನ್ನು ಕೆಲಸಕ್ಕೆ ಸೇರಿಕೋ ಅನ್ನುತ್ತಿದ್ದಾರೆ."

"ಏನು ಮಾಡೋಣ ಹೇಳು. ನಮ್ಮವರ ವಿದ್ಯವೂ ಹೀಗೇ ಹಾಳಾಯ್ತು. ಅವರೂ ಓದಿ ಒಂದು ಪರೀಕ್ಷೆ ಪ್ಯಾಸ್ ಮಾಡಿದ್ದರೆ ಹೀಗೆ ಬ್ಯಾಂಕ್ ಗುಮಾಸ್ತನಾಗಿ ಕೊಳೆಯಬೇಕಾಗಿತ್ತೇ?"

ಫಣಿಯಮ್ಮನ ಗುಡುಗು ಕೇಳಿಬಂತು.

"ಏನೇ ಇಬ್ಬರೂ ಹರಟೆ ಷುರುಮಾಡಿದಿರಿ?"

"ಇಲ್ಲ ಅತ್ತೇ."

ಎಂದು ಸೊಸೆಯರು ಬೇರೆ ಬೇರೆ ಕೆಲಸ ಹುಡುಕಿಕೊಂಡು ಹೊರಟರು.

ಒಂದು ದಿನ ಸಂಜೆ ಮನೆಯ ಮುಂದೆ ಒಂದು ಬೈಸಿಕಲ್ ಬಂದು ನಿಂತಿತು. ಮನೆಯಲ್ಲಿ ಯಾರೂ ಇರಲಿಲ್ಲ. ಫಣಿಯಮ್ಮ 'ಗಿರಿಜಾಕಲ್ಯಾಣ' ಹಾಡು ಕೇಳುವುದಕ್ಕೆ ಹೋಗಿದ್ದರು ಶ್ರೀನಿವಾಸ ಹೊರಗೆ ಹೋಗಲು ತಲೆಬಾಚಿಕೊಳ್ಳುತ್ತಿದ್ದ.

ಹೊಸದಾಗಿ ಬಂದವರನ್ನು ಒಳಗಿನಿಂದ ಗೌರ ಕಂಡು

"ಭಾವಯ್ಯಾ—ಬನ್ನಿ" ಎಂದಳು.

ಕೇಶವಯ್ಯ ಒಳಗೆ ಬಂದು ಕುಳಿತ. ಗೌರ ಒಳಗೆ ತಲೆಬಾಚಿಕೊಳ್ಳುತ್ತಿದ್ದ ಗಂಡನನ್ನು ಕರೆದುಕೊಂಡು ಬಂದು

"ಭಾವಯ್ಯ, ಸೀತಕ್ಕನ ಗಂಡ."

ಎಂದು ಪರಿಚಯಮಾಡಿಕೊಟ್ಟಳು. ಶ್ರೀನಿವಾಸ ಮರ್ಯಾದೆಯಿಂದ ಕಂಡು

"ಬನ್ನಿ. ಕುಳಿತುಕೊಳ್ಳಿ. ಮೊದಲೇ ಪರಿಚಯವಿಲ್ಲ."

"ಹೌದು."

“ ಏನು ಭಾವಯ್ಯಾ. ಬಹಳ ದಿವಸಗಳ ಮೇಲೆ ನಮ್ಮ ಜ್ಞಾಪಕ ಬಂತೇ ? ಸೀತಕ್ಕ ಹೇಗಿದ್ದಾಳೆ ? ”

“ ಚೆನ್ನಾಗಿದ್ದಾಳಮ್ಮಾ ”

“ ಗೌರಾ, ನಿಮ್ಮ ಭಾವಯ್ಯನಿಗೆ ಕಾಫಿ ತಂದುಕೊಡು. ”

ಎಂದು ಶ್ರೀನಿವಾಸ ಹೇಳಿದ. ಗೌರಾ ಒಳಗೆ ಹೋಗಲು ಸುಶೀಲಾ

“ ಹೋಗು ನಿಮ್ಮ ಭಾವಯ್ಯನ್ನ ಮಾತನಾಡಿಸು. ನಾನು ಕಾಫಿ ಮಾಡಿ ತಂದುಕೊಡುತ್ತೇನೆ ” ಎಂದಳು.

“ ಮನೆಯಲ್ಲಿ ಎಲ್ಲರೂ ಕ್ಷೇಮವೇ ಮಿ॥ ಶ್ರೀನಿವಾಸ್. ”

“ ಎಲ್ಲರೂ ಕ್ಷೇಮ. ತಂದೆ ಹೊರಗೆ ಹೋಗಿದ್ದಾರೆ. ”

“ ಆಗಲಿ ಇನ್ನೊಮ್ಮೆ ಅವರ ದರ್ಶನ ತೆಗೆದುಕೊಳ್ಳುತ್ತೇನೆ. ”

“ ಭಾವಯ್ಯ. ಸೀತಕ್ಕನ್ನ ಕರೆದುಕೊಂಡು ಬರಬಾರದಾಗಿತ್ತೇ. ”

“ ನಾನು ಕಾಲೇಜಿನಿಂದ ನೇರವಾಗಿ ಬಂದೆ. ಹೇಗೆ ಕರೆದುಕೊಂಡು ಬರಲಿ ಹೇಳು. ”

“ ಯಾವಾಗ ಕರೆದುಕೊಂಡು ಬರುತ್ತೀರಿ. ”

“ ನೀನೂ ನಿನ್ನ ಯಜಮಾನರೂ ಒಂದು ದಿನ ನಮ್ಮ ಮನೆಗೆ ಬನ್ನಿ. ಆಮೇಲೆ ಕರ್‍ಕೊಂಡು ಬರ್‍ತೇನೆ. ಎಂದು ಬರುತ್ತೀರಿ ಮಿ॥ ಶ್ರೀನಿವಾಸ್. ”

“ ನೀವು ಹೇಳಿದಂದು. ಹೋಗೋಣವೇ ಗೌರಾ. ”

“ ನನ್ನ ಕೇಳಿದರೆ. ”

“ ನಾಳೆ ಭಾನುವಾರ ನನಗೂ ಪುರಸತ್ತು. ಅಲ್ಲೇ ಮಧ್ಯಾಹ್ನ ಊಟಕ್ಕೆ ಬಂದುಬಿಡಿ. ಸಂಜೆಗೆ ಹಿಂದಿರುಗಿದರಾಯಿತು. ”

“ ಹಾಗೇ ಆಗಲಿ. ”

ಎಂದು ಶ್ರೀನಿವಾಸ ಒಪ್ಪಿಕೊಂಡ. ಒಳಗಿನಿಂದ ಸುಶೀಲಾ ‘ ಗೌರಾ ’ ಎಂದು ಕೂಗಿದಳು. ಗೌರ ಒಳಗೆ ಹೋಗಿ ಕಾಫಿ ತಂದಿತ್ತಳು. ಅಷ್ಟು ಹೊತ್ತಿಗೆ ಫಣಿಯಮ್ಮನವರ ಸ್ವಾರಿ ಚಿತ್ತೈಸಿತು. ಶ್ರೀನಿವಾಸ

“ ಅಮ್ಮಾ, ಇವರೇ ಗೌರನ ಅಕ್ಕನ ಗಂಡ. ಕಾಲೇಜಿನಲ್ಲಿದ್ದಾರೆ. ”

“ ಬನ್ನೀಪ್ಪ. ಸಂತೋಷ. ಸೀತಮ್ಮ ಚೆನ್ನಾಗಿದ್ದಾಳೆಯೇ ? ”

“ ಇದ್ದಾಳಮ್ಮ. ”

"ತುಂಬ ಕಾಯಿಲೆಯಾಗಿತ್ತೂಂತ ಕೇಳಿದ್ದೆನಲ್ಲಾ."

"ಹೌದು. ಈಗ ಆರೋಗ್ಯವಾಗಿದ್ದಾಳೆ."

"ಅಮ್ಮ, ನಾನೂ ಗೌರಾ ಭಾನುವಾರ ಊಟಕ್ಕೆ ಬಂಬೇಕೂಂತ ಕರೆಯೋದಿಕ್ಕೆ ಬಂದಿದ್ದಾರೆ."

"ಮನೆಯಲ್ಲಿ ಏನು ಹೆಚ್ಚುವರಿ?"

"ಏನೂ ಇಲ್ಲ. ಅವಳೂ ನೋಡಬೇಕೂಂತಿದ್ದಾಳೆ. ಒಂದು ದಿನ ಜತೆಯಲ್ಲಿ ಕುಳಿತು ಊಟಮಾಡೋಣಾಂತ ಹೇಳಿದೆ."

"ಆಗಬಹುದು. ಹೋಗಿಬಾ ಶ್ರೀನಿವಾಸು. ನೀವು ಯಾವಾಗ ಬರುತ್ತೀರಿ?"

"ಇನ್ನೊಂದು ಭಾನುವಾರ."

"ಸಂತೋಷ. ಇಲ್ಲೇ ಊಟಮಾಡಿಕೊಂಡು ಹೋಗಿ."

"ಇಲ್ಲಾಮ್ಮ. ಮನೆಯಲ್ಲಿ ಒಬ್ಬಳೇ ಕಾಯುತ್ತಿರುತ್ತಾಳೆ."

"ಅಷ್ಟುದೂರ ಮಲ್ಲೇಶ್ವರದಲ್ಲಿ ಏಕೆ ಮನೆ ಮಾಡಿದಿರಿ. ಇಲ್ಲೇ ಹತ್ತಿರ ಬಂದುಬಿಟ್ಟರೆ ಆಗತ್ತಲ್ಲಾ."

"ಒಳ್ಳೇ ಮನೆ ಸಿಕ್ಕಬೇಕಲ್ಲಮ್ಮ."

"ಅದೂ ನಿಜವೇ. ಬೆಂಗಳೂರು ಹಾಳಾಗಿಹೋಯ್ತು. ಬಾಡಿಗೆ ಎಷ್ಟು ಕೊಡುತ್ತಿದ್ದೀರಿ."

"೨೦ ರೂಪಾಯಿ."

"ಇಪ್ಪತ್ತು ರೂಪಾಯಿಯೇ? ತುಂಬ ಹೆಚ್ಚಾಯಿತಲ್ಲಪ್ಪಾ."

"ಹೌದು. ಸರಿಯಾದ ಮನೆ ಸಿಕ್ಕದೆ ತುಂಬ ತೊಂದರೆ ಪಟ್ಟೆ."

"ನಿಮಗೆಷ್ಟು ಸಂಬಳ?"

"ನೂರು ರೂಪಾಯಿ"

"ಮೇಲೆ ವರಮಾನ?"

"ಪಾಠ ಹೇಳುತ್ತೇನೆ. ಅದರಿಂದ ೪೦–೫೦ ರೂಪಾಯಿ ಬರತ್ತೆ."

"ಪರವಾಯಿಲ್ಲ. ಅನುಕೂಲವಾಗಿಯೇ ಇದ್ದೀರಿ."

"ಎಲ್ಲ ನಿಮ್ಮ ಆಶೀರ್ವಾದ."

"ಮುಖ್ಯ ಎಲ್ಲಾದರೂ ಚೆನ್ನಾಗಿದ್ದರೆ ಸಾಕು."

"ನನಗೆ ಹೊತ್ತಾಗತ್ತೆ. ಇನ್ನು ಹೊರಡಬೇಕು, ಭಾನುವಾರ ಮರೆಯ ಬೇಡಿ ಮಿ|| ಶ್ರೀನಿವಾಸ್.

"ಇಲ್ಲ ಹನ್ನೆರಡಕ್ಕೆ ಸರಿಯಾಗಿ ಬರುತ್ತೇವೆ."

"ಮನೆ ಗೊತ್ತಷ್ಟೆ?"

"ಸರಿಯಾಗಿ ಗೊತ್ತಿಲ್ಲ."

"ಮಲ್ಲೇಶ್ವರದ ದೊಡ್ಡ ಚೌಕ ಇದೆ ನೋಡಿ—ಅದರ ಬಲಗಡೆ ತಿರುಗಿದರೆ ನಾಲ್ಕನೆಯ ಮನೆ—ಮನೆ ಮೇಲೆ ನನ್ನ ಹೆಸರಿನ ಬೋರ್ಡಿದೆ."

"ಪತ್ತೆ ಮಾಡುತ್ತೇನೆ ಬಿಡಿ."

"ಇನ್ನು ಹೊರಡಲೇನಮ್ಮಾ—ಗೌರಾ."

"ಒಳ್ಳೇದು ಭಾವಯ್ಯ." ಎಂದಳು.

ಕೇಶವಯ್ಯನನ್ನು ಕಳುಹಿಸಿಕೊಟ್ಟು ಶ್ರೀನಿವಾಸ ಹಿಂದಿರುಗಿದ. ಅವನನ್ನು ನೋಡಿ ಫಣಿಯಮ್ಮ

"ತುಂಬ ಒಳ್ಳೇ ಹುಡುಗ ಕಣೋ."

"ಹೌದಮ್ಮ."

"ಇಪ್ಪತ್ತು ರೂಪಾಯಿ ಮನೆ ಬಾಡಿಗೆ ಕೊಡ್ತಾನಂತಲ್ಲಾ."

"ಅಲ್ಲ. ಅವನನ್ನು ಕಂಡ ಕೂಡಲೆ ಮನೆ ಬಾಡಿಗೆ, ಸಂಪಾದನೆ ಎಲ್ಲಾ ತನಿಖೆ ಮಾಡಿಬಿಟ್ಟೆಯಲ್ಲಾ."

"ತಪ್ಪೇನು?"

"ಈಗಿನ ಕಾಲದವರು ಏನಾದರೂ ತಿಳಿದುಕೊಳ್ಳುತ್ತಾರಮ್ಮ."

"ನಾನು ಈಗಿನ ಕಾಲದವಳಲ್ಲ. ಅದೇನು ಈಗ ಊಟಕ್ಕೆ ಕರೆಯೋದಿಕ್ಕೆ ಬಂದಿದ್ದದ್ದು?"

"ಸುಮ್ಮನೆ."

"ಸುಮ್ಮನೆ ಯಾಕಿದ್ದೀತು. ಮದುವೇಗೂ ಬರಲಿಲ್ಲ. ಈಗ ತಂಗೀಗೆ ಏನಾದರೂ ಉಡುಗೊರೆ ಕೊಡ್ಬೋದಿಕ್ಕೆ ಇರಬಹುದು."

"ನಿನ್ನದು ಯಾವಾಗಲೂ ಒಂದೇ ಲೆಕ್ಕಾಚಾರ."

"ಇಂಥ ಹುಡುಗನ ಮೇಲೆ ನಿಮ್ಮತ್ತೆ ಏನೇನೋ ಬೊಂಕಿದಳಲ್ಲ."

"ಏನು ಹೇಳಿದರು."

" ಕಲ್ಲು ಮನಸ್ಸಿನವನು—ಹೆಂಡತೀನ ಗೋಳು ಹುಯ್ದುಕೊಳ್ಳುತ್ತಾನಂತೆ ಅಂತ."

" ಇರಬಹುದು. ಮದುವೇಗೆ ಕೂಡ ಕಳಿಸಲಿಲ್ಲ ನೋಡು."

" ಕಳಿಸ್ತಾರೆ. ಇವರ ಮುದ್ದು ಮುಖ ನೋಡಿ. ಮರ್ಯಾದೆ ಗೊತ್ತಿಲ್ಲ–ನಡತೆ ಗೊತ್ತಿಲ್ಲ–ಕೊಡೋದು ಬಿಡೋದಂತೂ ಇಲ್ಲವೇ ಇಲ್ಲ. ಏನು ಜನವೋ ಜನ–ದನ."

" ಹೋಗಲಿ ಬಿಡಮ್ಮಾ. ಯಾರ ಮನೇದೋ ಸುದ್ದಿ ತೆಗೆದುಕೊಂಡು ನೀನೇಕೆ ಕೋಪ ಮಾಡಿಕೊಳ್ಳುತ್ತೀ."

ಎಂದ. ತಾಯಿ ಮಗನ ಸಂಭಾಷಣೆ ಕೇಳುತ್ತ ತರಕಾರಿ ಹೆಚ್ಚುತ್ತಿದ್ದ ಗೌರಿ, ಸುಶೀಲನಿಗೆ

" ಕೇಳಿದಿರಾ ಅಕ್ಕಾ."

" ಕೇಳುತ್ತಾ ಇದ್ದೀನಮ್ಮಾ."

" ಇವರಿಗೆ ಇನ್ನೇನು ಮಾಡಬೇಕಾಗಿತ್ತಂತೆ."

" ಅತ್ತೆ ಮೂಗಿಗೆ ಎರಡು ಸವರನ್ ನೇತುಹಾಕಿ ಕಳಿಸಬೇಕಾಗಿತ್ತು. ಧನ ಪಿಶಾಚ ಹಿಡಿದಿದೆ ಇವರಿಗೆ."

" ನಮ್ಮ ತಾಯಿಯನ್ನು ಬಯ್ಯಬೇಕೆಂದರೆ ಅತ್ತೆ ನಾಲಗೆ ಒಳ್ಳೇ ಹರಿತವಾಗತ್ತೆ."

" ಹೆಸರು ನೋಡು ಎಷ್ಟು ಚೆನ್ನಾಗಿಟ್ಟಿದ್ದಾರೆ — ಫಣಿಯಮ್ಮ. ಅದು ಹೋಗಲಿ. ಇದೇನು ಗೌರಾ–-ಇವತ್ತು ನಿನ್ನ ಭಾವ ಬಂದಿದ್ದದ್ದು.

" ಸೀತಕ್ಕ ಬುದ್ಧಿ ಹೇಳಿ ಕಳಿಸಿರಬೇಕು. ಅಕ್ಕಾ–ಭಾನುವಾರ ನೀವೂ ಬರುತ್ತೀರಾ ?"

" ನಾನೇಕೆ ? ನನ್ನ ಕರೆದಿಲ್ಲ ಬಿಟ್ಟಿಲ್ಲ."

" ನಾನು ಕರೀತೀನಿ ಅಕ್ಕಾ—ಆ ಅಕ್ಕನ ಮನೆಗೆ ಈ ಅಕ್ಕನ್ನ ಕರೆದುಕೊಂಡು ಹೋಗಬೇಕೂಂತ ತುಂಬ ಆಸೆ. ನೀವೂ ಬೇಸತ್ತಿದ್ದೀರಿ. ಒಂದು ದಿನವಾದರೂ ಈ ಅತ್ತೆ ಕಣ್ಮರೆಯಾಗಿ ಹೋಗಿಬರೋಣ."

" ಇಬ್ಬರೂ ಹೋಗಿಬಿಟ್ಟರೆ ಇಲ್ಲಿ ಅಡಿಗೆ ಗತಿ."

ಏನೆನ್ನಲಿಲ್ಲ. ಮತ್ತೆ ಗಟ್ಟಿಯಾಗಿ 'ಲೇ' ಎಂದ. ಅದಕ್ಕೂ ಸೀತಮ್ಮ ಉತ್ತರ ಕೊಡಲಿಲ್ಲ. 'ಸೀತಾ' ಎಂದ. ಸೀತಮ್ಮ ಬಂದು ಎದುರಿಗೆ ನಿಂತು

"ಎಂದಿನಿಂದ ಬಂತು ಈ 'ಲೇ'?"

"ಎಲ್ಲರೂ ತಮ್ಮ ತಮ್ಮ ಹೆಂಡತಿಯರನ್ನು 'ಲೇ' ಎಂದು ಕೂಗಬಹುದು. ನಾನು ಮಾತ್ರ ಕೂಗಬಾರದೋ?"

"ಏನ್ರೀ, ಪ್ರೊಫೆಸರ್ ಹೆಂಡತಿಯನ್ನು 'ಲೇ' ಎಂದು ಕೂಗುತ್ತೀರ."

"ತಪ್ಪಾಯಿತ್ರೀ, ಮಿಸೆಸ್ ಪ್ರೊಫೆಸರ್."

"ಇದೇನು ಇಷ್ಟು ಸಡಗರ ಇವತ್ತು"

"ಹೇಳಿದರೆ ಏನು ಕೊಡುತ್ತೀ."

"ಇನ್ನೇನು— ಕಾಫಿ ಕೊಡುತ್ತೇನೆ?"

"ಕಾಫಿ ಯಾರಿಗೆ ಬೇಕು?"

"ಇನ್ನೇನು ಬೇಕು?"

"ಒಂದು ಸಿಹಿ ಮುತ್ತು."

"ಹೇಳಿ—ಏನು ಸಮಾಚಾರ?"

"ಕಾಲೇಜಿಂದ ಬರುತ್ತಾ ನಿನ್ನ ತಂಗಿ ಮನೆಗೆ ಹೋಗಿದ್ದೆ."

"ಹಾ! ಹೋಗಿದ್ದರಾ?"

"ಪೂರ್ತಿ ಕೇಳು. ಅಷ್ಟರಲ್ಲಿಯೇ ಅವಸರ ನಿನಗೆ."

"ಬೇಕೇಂದ್ರೆ. ಬೇಗ ಹೇಳಿ."

"ನಿನ್ನ ತಂಗಿ ಸೊಗಸಾದ ಕಾಫಿ ಮಾಡಿಕೊಟ್ಟಳು. ನಿನಗಿಂತ ಅವಳೇ ಚೆನ್ನಾಗಿ ಕಾಫಿ ಮಾಡುತ್ತಾಳೆ ಕಣೇ."

"ಇರಬಹುದು."

"ನಾನು ಒಂದು ತಪ್ಪು ಮಾಡಿದೆ ನೋಡು."

"ಏನು ತಪ್ಪು."

"ಅವಳನ್ನೇ ನಾನು ಮದುವೆಯಾಗಬೇಕಾಗಿತ್ತು."

"ಇನ್ನು ಸಾಧ್ಯವಿಲ್ಲ. ಅವಳಿಗೆ ಮದುವೆಯಾಗಿದೆ—ಶ್ರೀನಿವಾಸನನ್ನು ಕಂಡಿದ್ದೀರಾ?"

"ಅವನನ್ನು—ಅವರಮ್ಮನನ್ನು ಕಂಡಿದ್ದೆ. ವೆಂಕಟಾಚಲಯ್ಯ ಸಿಕ್ಕ

ಲಿಲ್ಲ. ಹೊರಗೆ ಹೋಗಿದ್ದರಂತೆ. ನಿನ್ನ ತಂಗಿ, ಭಾವ ಇಬ್ಬರನ್ನೂ ನಾಳೆ ಭಾನುವಾರ ಊಟಕ್ಕೆ ಕರೆದುಬಂದಿದ್ದೇನೆ."

"ನಿಜವಾಗಿ !"

"ನಿಜವಾಗಿ"

"ಎಷ್ಟು ಒಳ್ಳೆಯವರೂಂದ್ರೆ ನೀವು."

"ಬರೀ ಹೊಗಳಿಕೆಯಲ್ಲಿ ಕಾಲಕಳೆಯಬೇಡ ನನ್ನ ಫೀಸು ಒಪ್ಪಿಸು."

ಅವಳು ಫೀಸು ಒಪ್ಪಿಸುವುದಕ್ಕೆ ಕೇಶವ ಬಿಡಲೇ ಇಲ್ಲ. ತಾನೇ ಒಪ್ಪಿಸಿಕೊಂಡ.

"ಭಾನುವಾರ ಏನು ಅಡಿಗೆ ಮಾಡುತ್ತೀ ?"

"ನೀವೇ ಹೇಳಿ."

"ಬೋಂಡ. ವಾಂಗೀಬಾತ್ ಶಾವಿಗೆಖೀರು ಸ್ವೀಟ್ ಏನ್ನೂ ಮಾಡುತ್ತಿ."

"ಮೈಸೂರುಪಾಕ್ ಮಾಡಲೇ ?"

"ಓಹೋ !—ತಂಗೀಗೇ ಪ್ರೆಸೆಂಟ್ ಏನುಕೊಡುತ್ತಿ."

"ನೀವು ಇಷ್ಟು ದುಡ್ಡು ಕೊಡ್ತೀನೀಂತ ಹೇಳಿದರೆ, ಅಷ್ಟರಲ್ಲಿ ಏನಾದರೂ ತರುತ್ತೇನೆ."

"ನೂರು ರೂಪಾಯಿ ಬಡ್ಜೆಟ್."

"ಬಂಗಾಳಾ ಸಿಲ್ಕ್ ಸೀರೆ ತರಲೇ !"

"ಬೇಕಾದ್ದು ತೆಗೆದುಕೊಂಡು ಬಾ. ನಾನು ಮೀನ್ (mean) ಅಲ್ಲ ಅಂತ ನಿನಗೆ ಗೊತ್ತಿದೆ."

"ನಾಳೆ ಸೊಸೈಟೀಗೇ ಹೋಗಿ ತರೋಣ ನೀವು ಬೇಗ ಮನೆಗೆ ಬನ್ನಿ."

"ಆಗಲಿ" ಎಂದ

ಗೌರ ಗಂಡನಿಗೆ ಹೆಚ್ಚಿಕೊಟ್ಟು ಸುಶೀಲನನ್ನು ಕರೆದುಕೊಂಡು ಹೋಗುವುದಕ್ಕೆ ಏರ್ಪಾಟುಮಾಡಿದಳು. ಫಣಿಯಮ್ಮ ಮೊದಲು ಗೊಣಗಿದರು. ವೆಂಕಟ ಚಲಯ್ಯ ಮಧ್ಯೆ ಬಾಯಿಹಾಕಿ 'ಹೋಗಿಬರಲಿ ಸುಮ್ಮನಿರೀ. ಹುಡುಗರು—ಅವರಿಗೂ ಮನೇಲೇ ಇದ್ದು ಬೇಜಾರಾಗಲ್ಲವೇ' ಎಂದರು.

ಭಾನುವಾರ ಮನೆಯ ಮುಂದೆ ಗಾಡಿ ಬಂದು ನಿಲ್ಲಲು ಸೀತಮ್ಮ ಒಲೆಯ ಮೇಲೆ ಬೇಯುತ್ತಿದ್ದ ಬೋಂಡವನ್ನೂ ಮರೆತು ಸ್ವಾಗತಿಸಲು ಹೋದಳು.

"ಸೀತಕ್ಕ— ಇವರು ನಾನೇಳಿದ್ದಲ್ಲ ನನ್ನ ನಾದಗಿತ್ತಿ. ನಿಜವಾಗಿಯೂ ನನ್ನ ಅಕ್ಕ ಸುಶೀಲ."

"ಬನ್ನಿ, ಒಳಗೆ ಬನ್ನಿ."

ಎಂದು ಸೀತಮ್ಮ ಅವರನ್ನು ಅಡಿಗೆ ಮನೆಗೇ ಕರೆದುಕೊಂಡು ಹೋದಳು. ಕೇಶವಯ್ಯ, ಶ್ರೀನಿವಾಸನನ್ನು ತನ್ನ ರೂಮಿಗೆ ಕರೆದುಕೊಂಡು ಹೋದ.

ಒಂದು ಒಬ್ಬೆ ಬೋಂಡ ಸೀದುಹೋಗಿತ್ತು. ಸೀತಮ್ಮ ಅದನ್ನು ತೆಗೆದು ಹಾಕಿ ಬೇರೆ ಒಬ್ಬೆ ಹಾಕಿದಳು.

"ಸ್ವಲ್ಪ ಒಲೆ ನೋಡಿಕೋ ಗೌರ ಬಂದೆ"

ಎಂದು ಎದ್ದು ಹೋಗಿ ಗಂಡನನ್ನು ಹೊರಗೆ ಕರೆದಳು.

"ಏನು?"

"ಗೌರನ ನಾದಗಿತ್ತಿ ಬಂದಿದ್ದಾರಲ್ಲಾ."

"ಬರಲಿ ಬಿಡು, ಸಂತೋಷ."

"ಗೌರ ಒಬ್ಬಳಿಗೇ ಸೀರೆ ಓದಿಸುವುದು ಹೇಗೆ?"

"ಅವರಿಗೆ ಏನು ಕೊಡಬೇಕೂಂತ."

"ನೋಡಿ—ಸೀರೇ."

"ಅವರಿಗೂ ಒಂದು ಸೀರೆ ಕೊಟ್ಟುಬಿಡು. ಹೇಗೂ ಬಂಗಾಳದ ಸಿಲ್ಕು ಅಗ್ಗ. ನನ್ನ ಬಡ್ಜೆಟ್ ನಲ್ಲಿ ಇನ್ನೂ ೪೬-೦೦. ಮಿಕ್ಕಿದೆ. ಇನ್ನೊಂದು ಹತ್ತು ರೂಪಾಯಿ ಸೇರಿಸಿ ಕೊಡುತ್ತೇನೆ."

"ಈಗ ತರುವವರು ಯಾರು?"

"ಬೈಸಿಕಲ್ ಹಾಕಿಕೊಂಡು ಹೋಗಿ ತೆಗೆದುಕೊಂಡು ಬಾ ಅಷ್ಟು ಸ್ಪಷ್ಟವಾಗಿ."

ಸೀತಾ ನಕ್ಕು

" ಹಾಗೇ ಬರುವಾಗ ನಾಲ್ಕು ನಿಂಬೆಹಣ್ಣು ತೆಗೆದುಕೊಂಡು ಬನ್ನಿ— ಹಾಕಿದರೆ ಚೆನ್ನಾಗಿರಬಹುದು."

" ನೋಡು. ಇನ್ನೂ ಏನಾದರೂ ಬೇಕಾದರೆ ಈಗಲೇ ಹೇಳಿಬಿಡು. ತಿರುಗಿ ನನ್ನ ಅಟ್ಟಬೇಡ."

" ಇನ್ನೇನೂ ಬೇಡ. ಎಲ್ಲಾ ಇದೆ."

" ನಾವು ಹೋದರೆ ಶ್ರೀನಿವಾಸ ಒಬ್ಬರೇ ಇರುತ್ತಾರಲ್ಲಾ."

" ಗೌರಿನ್ನ ಮಾತನಾಡಿಸುತ್ತಿರು ಎಂದು ಹೇಳುತ್ತೇನೆ."

" ಹಾಗಾದರೆ ಸರಿ."

ಎಂದು ಶ್ರೀನಿವಾಸನ ಕ್ಷಮೆ ಬೇಡಿ ಕೇಶವಯ್ಯ ಬೈಸಿಕಲ್ ತೆಗೆದುಕೊಂಡು ಹೊರಟ. ಸೀತಮ್ಮ ಪ್ರೇಮ ಅಭಿಮಾನಗಳಿಂದ ತಂಗಿಯನ್ನು ನೋಡುತ್ತಾ

" ಕೊನೆಗೂ ಬಂದೆಯಲ್ಲಾ ಗೌರಿ."

" ಸುಶೀಲಮ್ಮ—ನಾನೇ ಬಂದು ಕರೆಯಬೇಕಾಗಿತ್ತು. ಆದರೂ ನೀವು ದೊಡ್ಡ ಮನಸ್ಸು ಮಾಡಿ ಬಡವರ ಮನೆಗೆ ಬಂದಿರಲ್ಲಾ. ತುಂಬ ಸಂತೋಷ."

ಅಡಿಗೆಯೆಲ್ಲಾ ಮುಗಿದಿತ್ತು—ಸ್ವಲ್ಪ ಚಿಲ್ಲರೆ ಪಲ್ಲರೆ ಕೆಲಸ ಮಾತ್ರ ಬಾಕಿಯಿತ್ತು. ಒಲೆ ಮುಂದೆ ಕುಳಿತ ಗೌರಿ ತಾನೇ ಉಳಿದ ಬೋಂಡ ಕರಿಯಬೇಕೆಂದು ಹಟ ಹಿಡಿದಳು.

" ನೀನು ನನ್ನ ಬಯ್ಯಿಸುತ್ತೀ ಗೌರಿ."

" ಏಕಕ್ಕಾ."

" ಇನ್ನೂ ತಂಗಿ ಮನೆಯೊಳಗೆ ಕಾಲಿಟ್ಟಿಲ್ಲ. ಅವಳಿಗೆ ಕೆಲಸ ಹಚ್ಚಿಬಿಟ್ಟೆಯಲ್ಲಾ ಎಂದು ರೇಗುತ್ತಾರೆ."

" ಇರಲಿ ಬಿಡು, ಭಾವಯ್ಯನಿಗೆ ನಾನು ಸಮಾಧಾನ ಹೇಳುತ್ತೇನೆ."

ಕೋಸುಂಬರಿಗೆ ತೆಂಗಿನಕಾಯಿ ತುರಿದು ಹಾಕಿ, ಒಗ್ಗರಣೆ ಕೊಡುವುದು ಬಾಕಿಯಿತ್ತು. ಸೀತಮ್ಮ ಕಾಯಿ, ಈಳಿಗೆಮಣೆ ತರಲು ಅದನ್ನು ಸುಶೀಲ ಕೈಗೆ ತೆಗೆದುಕೊಂಡಳು.

ದೇವ್ರೇ—ಸುಶೀಲಮ್ಮ."

"ಇರಲಿ ಬಿಡ್ರಿ— ಯಾರು ಮಾಡಿದರೇನು. ಇದೂ ನಮ್ಮಮನೆಯೇ.

"ಅಕ್ಕ ತಂಗಿ ಮಾತನಾಡಿಕೊಂಡು ಬಂದಿದ್ದೀರೋ."

"ಸೀತಕ್ಕ, ನೀನು ಎಲೆ ಹಾಕು. ತುಂಬ ಹಸಿವಾಗುತ್ತಾ ಇದೆ."

"ನೀವೆಲ್ಲ ಕೂತುಕೊಳ್ಳಿ— ನಾನು ಬಡಿಸುತ್ತೇನೆ."

ಎಂದು ಸುಶೀಲಾ ಹೇಳಿದಳು.

"ಎಲ್ಲಾದರೂ ಉಂಟೇ. ಗೌರಾ, ನಿಮ್ಮ ಯಜಮಾನರು ಒಬ್ಬರೇ ಕೂತಿದ್ದಾರಲ್ಲೇ. ಹೋಗು ಮಾತನಾಡಿಸಿಕೊಂಡು ಬಾರೇ."

"ಏಕೆ ಆಮೇಲೆ ನನ್ನ ಹಾಸ್ಯ ಮಾಡೋಕೋ?"

"ಹಾಸ್ಯವೇನು ಬಂತು."

"ಒಂದು ಗಳಿಗೆ ಇವಳ ಜೀವ ತಡಿಯಲಿಲ್ಲ. ಗಂಡನ ಮುಖ ನೋಡೋದಿಕ್ಕೆ ಹೋದಳು ಅನ್ನೋದಿಕ್ಕೆ."

"ಹಾಸ್ಯ ಮಾಡಲ್ಲ ಹೋಗಿ ಬಾ. ಅಪರೂಪಕ್ಕೆ ಅವರು ಬಂದಿದ್ದಾರೆ ಬೇಜಾರು ಮಾಡಿಕೊಂಡಾರು?"

"ಭಾವಯ್ಯ ಎಲ್ಲಿ?"

"ಸ್ವಲ್ಪ ಪೇಟೆಗೆ ಹೋಗಿದ್ದಾರೆ."

"ಹೋಗು ಗೌರಾ."

ಎಂದು ಸುಶೀಲನೂ ಹೇಳಿದಳು. ಗೌರ ಮೋಂಡ ಬಾಣಾಲೆ ಕೆಳಗಿಳಿಸ್ಯ ತೂಳಿದುಕೊಂಡು ಗಂಡನನ್ನು ನೋಡಲು ಹೋದಳು.

"ಬೇಜಾರಾಯಿತೇ?"

"ಇಲ್ಲ ನಿಮ್ಮ ಭಾವನ ಜ್ಞಾಪಕ ನೋಡಾ ಇದ್ದೆ. ನಿನ್ನಾಗ ಓಡಿಹೋಗಿರು ಕಣೇ—ನಾನು ಸಿಗೋಂತಿದ್ದೆ."

"ಅಗೋ ಭಾವಯ್ಯ ಬಂದರು. ನಾನು ಒಳಗೆ ಹೋಗು."

ಎಂದು ಒಳಕ್ಕೆ ಬಂದು ಅಕ್ಕನಿಗೆ ನೆರವಾದಳು.

ಎಲೆ ಹಾಕಿ, ಎಲ್ಲರನ್ನೂ ಕೂಡಿಸಿ ಬಡಿಸಿ ಸೀತಮ್ಮ ಕಣ್ತುಂಬ ನೋಡಿ ಸಂತೋಷಿಸಿದಳು. ಕೇಶವಯ್ಯ ಶ್ರೀನಿವಾಸನನ್ನು ಚೆನ್ನಾಗಿ ವಿಚಾರಿಸಿಕೊಂಡು ಪ್ರತಿಪದಾರ್ಥವನ್ನೂ ಎರಡೆರಡು ಸಲ ಹಾಕಿಸಿದ.

ಊಟ ಮುಗಿದ ಮೇಲೆ ಕೇಶವಯ್ಯ ಶ್ರೀನಿವಾಸ ರೂಮಿಗೆ ಹೋದರು.

“ನಾನೇನು ಒಲ್ಲೆನಮ್ಮ. ಭಾವನವರು ಬಾರದಿದ್ದರೆ ಸುಶೀಲಕ್ಕ ಮನಸ್ಸಿಗೆ ದುಃಖ ತಂದುಕೊಂಡಾರು.”

ಸುಶೀಲನಿಗೆ ನಾಚಿಕೆಯಿಂದ ಮುಖ ಕೆಂಪೇರಿತು.

ಎಲ್ಲರೂ ನಕ್ಕಿದ್ದನ್ನು ಕಂಡು ತಾನು ಹಿಂದುಳಿಯಬಾರದೆಂದು ನಗುತ್ತಾ,

“ಗೌರಾ, ನೀನು ಹರಟೇ ಮಲ್ಲಿ ಕಣೇ” ಎಂದಳು.

ಸೀತಕ್ಕ ಗೌರನನ್ನು ಬಿಡಲಿಲ್ಲ. ಅವಳಿಂದ ತಾಂಬೂಲ ಮಾಡಿಸಿ ಶ್ರೀನಿವಾಸನಿಗೆ ಕೊಡಿಸಿದಳು. ತಾನೊಂದು ತಾಂಬೂಲ ಸಿದ್ಧಮಾಡಿ ಗಂಡನಿಗೆ ನೀಡುತ್ತಾ

“ತೊಗೊಳ್ಳಿ. ಆಮೇಲೆ ನೀವೆಲ್ಲಾದರೂ ಕೊಡಲಿಲ್ಲವೆಂದುಕೊಂಡರೆ ನಾನೆಲ್ಲಿ ಹೋಗಲಿ.”

“ನೋಡಿ ನನ್ನ ದೂರ್ವಾಸ ಅಂತ ಕರೆಯುತ್ತಿದ್ದಾಳೆ.”

“ದೂರ್ವಾಸರಿಗೆ ಇನ್ನು ಕೋಪವೇ ಬರಲ್ವ” ಎಂದು ಗೌರ ಕೇಳಿದಳು.

ಹಾಗೆ ಹೇಳುತ್ತೀಯಮ್ಮಾ!
ನಿಮಗಿಂತಲೂ ಹೆಚ್ಚೇ?”
ಅಕ್ಕತಂಗಿ ಚೆನ್ನಾಗಿ ಸೇರಿಕೊಂಡುಬಿಟ್ಟಿರಿ. ಹಾಗಲಕಾಯಿಗೆ ಬೇವಿನ ಕಾಯಿ ಸಾಕ್ಷ್ಯ ಹೇಳಬೇಕು.”

“ನೀವು ಮುಂದೇನು ಮಾಡಬೇಕೆಂದಿರುವಿರಿ ಶ್ರೀನಿವಾಸ್” ಎಂದು ಕೇಶವಯ್ಯ ಕೇಳಿದ.

“ಲಾಗೆ ಹೋಗಬೇಕೊಂತಿದ್ದೆ. ಮನೆಯಲ್ಲಿ ಒಪ್ಪಲಿಲ್ಲ. ರಿಸಲ್ಟ್ ಬಂದ ಮೇಲೆ ತಿಳಿದೀತು.”

“ಎಂ.ಎ., ಗೆ ಓದಿ.”

“ಓದಿದ್ದು ಇಷ್ಟೇ ಸಾಕು ಎಂದು ನಮ್ಮ ತಂದೆಯವರ ಅಭಿಪ್ರಾಯ.”

“ನೀನು ಏನು ಹೇಳುತ್ತೀ ಗೌರ.”

“ನಾನೇನು ಹೇಳಲಿ ಭಾವಯ್ಯ. ಅವರು ಮುಂದಕ್ಕೆ ಓದಲಿ ಎಂದು ನನಗೂ ಮನಸ್ಸು. ಎಲ್ಲಾ ನಿಶ್ಚಯಿಸುವುದಕ್ಕೆ ಹಿರಿಯರಿದ್ದಾರಲ್ಲಾ.”

“ಮನೆ ತುಂಬ ಚೆನ್ನಾಗಿದೆ ಸಾರ್.”

"ಹೌದು. ಆದರೆ ಎಲ್ಲದಕ್ಕೂ ದೂರ. ಕಾಲೇಜಿಗಂತೂ ಬಹಳ ದೂರ."

"ನಮ್ಮ ಮನೆ ಹತ್ತಿರ ಮನೆ ಸಿಕ್ಕುವ ಹಾಗಿದ್ದರೆ ನೋಡುತ್ತೇನೆ. ಅಲ್ಲೇ ಬಂದು ಬಿಡುತ್ತೀರಾ?"

"ಓಹೋ!"

"ಸಂಜೆಗೆ ಎಲ್ಲರೂ ಪಿಕ್ಚರಿಗೆ ಹೋಗೋಣ" ಎಂದ ಕೇಶವಯ್ಯ.

"ಇವತ್ತು ಬೇಡ. ಇನ್ನೊಂದಾದರೂ ಹೋಗೋಣ" ಎಂದು ಶ್ರೀನಿವಾಸ ಉತ್ತರಕೊಟ್ಟ.

"ಸ್ವಲ್ಪ ಮಲಗುತ್ತೀರಾ ಶ್ರೀನಿವಾಸ್."

"ಆಗಬಹುದು."

"ನೀವು ಮಾತನಾಡಿಕೊಳ್ಳುತ್ತಿರಿ ನಾನು, ಶ್ರೀನಿವಾಸ್ ಸ್ವಲ್ಪ ವಿಶ್ರಾಂತಿ ತೆಗೆದುಕೊಳ್ಳುತ್ತೇವೆ."

"ಕಾಫಿ ವೇಳೆ ಎಬ್ಬಿಸುತ್ತೇನೆ. ಅಷ್ಟು ಹೊತ್ತಿಗೆ ಸಿದ್ಧ ಮುಗಿಸಿರಿ." ಎಂದು ಸೀತಮ್ಮ ಎಚ್ಚರಗೊಟ್ಟಳು.

ಕೇಶವಯ್ಯ ಶ್ರೀನಿವಾಸನಿಗೆ ಒಂದು ಮಂಚದ ಮೇಲೆ ಹಾಸಿಕೊಟ್ಟು ತಾನು ಎದುರು ಮಂಚದ ಮೇಲೆ ಮಲಗಿದ.

"ನೀವು ಕಾಲೇಜಿಗೆ ಬಂದು ಎಷ್ಟು ವರ್ಷವಾಯಿತು ಕೇಶವಯ್ಯ?"

"ಆರು ವರ್ಷದ ಮೇಲಾಯಿತು."

"ಇನ್ನೂ ನಿಮ್ಮನ್ನು ಅಸಿಸ್ಟೆಂಟ್ ಪ್ರೊಫೆಸರ್ ಮಾಡಿಲ್ಲವೇ?"

"ನನ್ನ ವಿದ್ಯಾರ್ಥಿಗಳಾಗಿದ್ದವರು ಈಗ ಅಸಿಸ್ಟೆಂಟ್ ಪ್ರೊಫೆಸರ್ ಆಗಿದ್ದಾರೆ."

"ಏನನ್ಯಾಯ."

"ಮಾದರಿ ಮೈಸೂರು. ಇಲ್ಲಿ ಜನಾಂಗದವರಿಗೆ ಊರ್ಜಿತವಿಲ್ಲ."

"ಸ್ವಲ್ಪ ಗಲಾಟೆಮಾಡಬೇಕಾಗಿತ್ತು."

"ಎಲ್ಲಾ ಆಯ್ತು. ನಮ್ಮ ಕೂಗು ಕೇಳುವವರು ಯಾರು ಹೇಳಿ. ಮುಖ್ಯ ಈ ಜಾತಿಯಲ್ಲಿ ಹುಟ್ಟಿದ್ದು ನಮ್ಮ ತಪ್ಪು."

"ವಿದ್ಯಾ ಸಂಸ್ಥೆಗಳೂ ಜಾತಿಭೂತಕ್ಕೆ ಬಲಿಯಾದರೆ ಮುಂದಿನ ಜನಾಂಗದ ಗತಿಯೇನು?"

"ದೇವರೇ ಗತಿ."

"ಇದೆಲ್ಲಾ ನೋಡಿದರೆ ಜೀವನವೇ ಬೇಸರವಾಗುತ್ತೆ."

"ಹೌದು. ಆದರೆ ಬೇಸರಮಾಡಿಕೊಂಡರೆ ಆಗುತ್ತದೆಯೇ ಹೇಳಿ.

"ನನಗೂ ಭವಿಷ್ಯವೆಲ್ಲಾ ಕಗ್ಗತ್ತಲಯಾಗಿ ಕುಳಿತಿದೆ."

"ಮನೆಯಲ್ಲಿ ಒಪ್ಪಿಸಿ ಎಂ.ಎ. ಗೆ ಹೋಗಿ."

"ಎಂ.ಎ. ಮಾಡಿ ಮಾಡುವುದೇನು."

"ಬಿ.ಎ. ಗಿಂತ ಎಂ.ಎ. ಡಿಗ್ರಿ ವಾಸಿ."

"ನಾನು ಕೆಲಸ ಹುಡುಕುತ್ತಾ ಇದ್ದೀನಿ ಕೇಶವಯ್ಯ. ಮೈಸೂರು ಸರ್ವಿಸ್ ಮಾತ್ರ ಮಾಡಲ್ಲ. ಅಷ್ಟು ಮದರಾಸೋ ಬೊಂಬಾಯಿಗೋ ಹೋಗಿ ಬಿಡಬೇಕೂಂತ ಆಸೆ.

"ಬೊಂಬಾಯಿ ಮದರಾಸಿಗೆ ಹೋದ ಮೈಸೂರಿನವರು ಚನ್ನಾಗಿದ್ದಾರಂತೆ. ನಾನೂ ಹೊರಗೆ ಜಾರಿಕೊಳ್ಳುವುದಕ್ಕೆ ಲೆಕ್ಕಹಾಕಿಕೊಳ್ಳುತ್ತಿದ್ದೇನೆ."

"ಒಂದೇ ಊಟ ನೋಡಿ. ಇಬ್ಬರೂ ಹೊರಟು ಹೋಗೋಣ."

"ಆಗಬಹುದು."

ಎಂದ. ಕಣ್ಣಿಗೆ ಹೊಂಪು ಒಡೆಯುತ್ತ ಬಂದಿದ್ದ ಕೇಶವಯ್ಯ ಸುಮ್ಮನಾದುದನ್ನು ಕಂಡು ಶ್ರೀನಿವಾಸನೂ ಕಣ್ಣು ಮುಚ್ಚಿಕೊಂಡ.

ಸೀತಮ್ಮನಿಗೆ ಸಂಗೀತ ಜತೆ. ಸುಶೀಲನ ಜತೆ ತುಂಬ ಮಾತನಾಡಬೇಕೆಂದು ಆಸೆ. ಆದರೆ ಮಾತೇ ಬರಲೊಲ್ಲದು.

"ಮನಸ್ಸು ತುಂಬಿದರೆ ಮಾತು ಬರಲ್ಲ ಅನ್ನುತ್ತಲ್ಲವೆ ಸುಶೀಲಮ್ಮ.

"ಹೌದರಿ. ಹೃದಯಗಳು ಹೀಗೆ ಬೆರೆತುಹೋಗಿರುವಾಗ ಮಾತುಗಳೂ ಏಕೆ!"

"ಅಕ್ಕ, ನನ್ನ ನೀವು ಜ್ಞಾಪಿಸಿಕೊಳ್ಳೋದು ಎಷ್ಟು ಚೆನ್ನಾಗಿ ಗೊತ್ತಾಗುತ್ತೇಂತ, ಎಷ್ಟೋಸಲ ನೀನು ಕೂಗಿ ಕರೆದ ಹಾಗಾಗುತ್ತೆ. ಆ ಹೊತ್ತಿಗೆ ಸರಿಯಾಗಿ ಸುಶೀಲಕ್ಕ ಬಂದು ಏನಾದರೂ ಪ್ರೀತಿಯಾಗಿ ಮಾತನಾಡುತ್ತಾರೆ."

"ಗೌರಿ ನನ್ನ ಬಹಳ ಹೊಗಳುತ್ತಾಳೆ ಸೀತಕ್ಕ. ನೀವು ಇವಳ ಈ ದುರಭ್ಯಾಸ ಬಿಡಿಸಬೇಕು."

ಕುಳಿತ. ಶ್ರೀನಿವಾಸ ಗಂಟೆನೋಡಿ "ಹಾಳಾಯಿತು, ಇನ್ನು ಹೊರಡ ಬೇಕು ಕೇಶವಮೂರ್ತಿ" ಎಂದು ಹೇಳಿದ

ಸೀತಮ್ಮ, ಗೌರಿ, ಸುಶೀಲ ಇಬ್ಬರಿಗೂ ಹೊಸಗಿಟ್ಟು ಸೀರೆ ಓದಿಸಿದಳು, ಗೌರಿ ಅದನ್ನು ಕಂಡು ಹಿಗ್ಗಿದಳು. ಸುಶೀಲ

"ನನಗೇತಕ್ಕೆ ಈಗ ಉಡುಗೊರೆ ಸೀತಕ್ಕ."

"ಹಾಗೆ ನೀನು ಬೇರೆಯಲ್ಲ. ಗೌರಿ ಬೇರೆ ಅಲ್ಲ ಸುಶೀಲಮ್ಮ, ದಯ ಯಿಟ್ಟು ತೆಗೆದುಕೊಳ್ಳಿ"

"ಮುಂದಿನ ಭಾನುವಾರ ಬರುತ್ತೀರಷ್ಟೇ ?"

"ಖಂಡಿತವಾಗಿ"

ಎಂದು ಸೀತಮ್ಮ ಹೇಳಿದಳು. ಶ್ರೀನಿವಾಸನೂ 'ಖಂಡಿತ ಬರಬೇಕು, ತಪ್ಪಕೂಡದು' ಎಂದು ಕೇಶವಮೂರ್ತಿಯನ್ನೊಪ್ಪಿಸಿದ

ಕೇಶವಮೂರ್ತಿ ಅವರ ಜತೆ ಜಟಕಾಸ್ಟ್ಯಾಂಡಿನ ತನಕ ಹೋಗಿ ಗಾಡಿ ಮಾಡಿಕೊಟ್ಟು ಮನೆಗೆ ಬಂದನು

"ಸೀತಾ"

"ಏನು ?"

"ಸಂತೋಷವಾಯಿತೇ ?"

"ಅದನ್ನ ಬಾಯಿಂದ ಬೇರೆ ಹೇಳಲೆ.

"ಶ್ರೀನಿವಾಸ ಒಳ್ಳೆಯ ಹುಡುಗ ಕಣೇ - ಸ್ವಲ್ಪವೂ ಜಂಭವಿಲ್ಲ."

"ನನಗೂ ಹಾಗೇ ಅನ್ನಿಸಿತು."

"ಮುಂದಿನ ಭಾನುವಾರ ಹೋಗೋಣ. ಅವರು ನಮ್ಮ ಮನೆಗೆ ಬಂದ ಮೇಲೆ ನಾವು ಹೋಗದಿದ್ದರೆ ತಪ್ಪಾಗುತ್ತೆ."

"ನಾನು ಬೇಡವೆನ್ನುತ್ತೇನೆಯೆ ?"

ಎಂದಳು. ಅವಳ ಮನಸ್ಸು ನಿರ್ಮಲಾನಂದದಲ್ಲಿ ಲೀನವಾಯಿತು! ಕಳೆದುಹೋಗಿದ್ದ ಭಾರಿ ಬೆಲೆ ಬಾಳುವ ವಸ್ತು ಅವಳಿಗೆ ಮತ್ತೆ ದೊರಕಿ ದಂತಾಗಿತ್ತು. ದುಃಖದಿಂದ ಶೋಷಿತನಾಗಿದ್ದ ದೇಹಕ್ಕೆ ಅಮೃತಸೇಚನೆ ಯಾದಂತಾಗಿತ್ತು.

ಗೌರಿಯ ನಿರ್ಹೇತುಕ ವಿಶ್ವಾಸ, ಸುಶೀಲಮ್ಮನ ವಿನಯಪೂರ್ಣ

ಕುಳಿತ. ಶ್ರೀನಿವಾಸ ಗಂಟೆನೋಡಿ “ ಸಾಲಾಯಿತು, ಇನ್ನು ಹೊರಡಬೇಕು ಕೇಶವಮೂರ್ತಿ ” ಎಂದು ಹೇಳಿದ.

ಸೀತಮ್ಮ, ಗೌರಿ, ಸುಶೀಲ ಇಬ್ಬರಿಗೂ ಹೊಸಗಿಟ್ಟು ಸೀರೆ ಓದಿಸಿದಳು, ಗೌರಿ ಅದನ್ನು ಕಂಡು ಹಿಗ್ಗಿದಳು. ಸುಶೀಲ

“ ನನಗೇತಕ್ಕೆ, ಈಗ ಉಡುಗೊರೆ ಸೀತಕ್ಕ.”

“ ನನಗೆ ನೀವು ಬೇರೆಯಲ್ಲ, ಗೌರಿ ಬೇರೆ ಅಲ್ಲ ಸುಶೀಲಮ್ಮ, ದಯಯಿಟ್ಟು ತೆಗೆದುಕೊಳ್ಳಿ.”

“ ಮುಂದಿನ ಭಾನುವಾರ ಬರುತ್ತೀರಷ್ಟೇ ?”

“ ಖಂಡಿತವಾಗಿ ”

ಎಂದು ಸೀತಮ್ಮ ಹೇಳಿದಳು. ಶ್ರೀನಿವಾಸನೂ ‘ ಖಂಡಿತ ಬರಬೇಕು, ತಪ್ಪಕೂಡದು ’ ಎಂದು ಕೇಶವಮೂರ್ತಿಯನ್ನೊಪ್ಪಿಸಿದ.

ಕೇಶವಮೂರ್ತಿ ಅವರ ಜೊತೆ ಜಟಕಾಸ್ಟ್ಯಾಂಡಿನ ತನಕ ಹೋಗಿ ಗಾಡಿ ಮಾಡಿಕೊಟ್ಟು ಮನೆಗೆ ಬಂದ.

“ ಸೀತಾ.”

“ ಏನು ?”

“ ಸಂತೋಷವಾಯಿತೇ ?”

“ ಅದನ್ನು ಬಾಯಿಂದ ಹೇಗೆ ಹೇಳಲಿ.”

“ ಶ್ರೀನಿವಾಸ ಒಳ್ಳೆಯ ಹುಡುಗ ಕಣೇ— ಸ್ವಲ್ಪವೂ ಜಂಭವಿಲ್ಲ.”

“ ನನಗೂ ಹಾಗೇ ಅನ್ನಿಸಿತು.”

“ ಮುಂದಿನ ಭಾನುವಾರ ಹೋಗೋಣ. ಅವರು ನಮ್ಮ ಮನೆಗೆ ಬಂದ ಮೇಲೆ ನಾವು ಹೋಗದಿದ್ದರೆ ತಪ್ಪಾಗುತ್ತೆ.”

“ ನಾನು ಬೇಡವೆನ್ನುತ್ತೇನೆಯೆ ?”

ಎಂದಳು. ಅವಳ ಮನಸ್ಸು ನಿರ್ಮಲಾನಂದದಲ್ಲಿ ಲೀನವಾಯಿತು! ಕಳೆದುಹೋಗಿದ್ದ ಭಾರಿ ಬೆಲೆ ಬಾಳುವ ವಸ್ತು ಅವಳಿಗೆ ಮತ್ತೆ ದೊರಕಿದಂತಾಗಿತ್ತು. ದುಃಖದಿಂದ ಶೋಷಿತವಾಗಿದ್ದ ದೇಹಕ್ಕೆ ಅಮೃತಸೇಚನೆಯಾದಂತಾಗಿತ್ತು.

ಗೌರಿಯ ನಿರ್ಹೇತುಕ ವಿಶ್ವಾಸ, ಸುಶೀಲಮ್ಮನ ವಿನಯಪೂರಿತ

ವಾಗಿ ಬಳಸಬೇಕು. ವಿವೇಕವಂತವಾದ ಶಕ್ತಿಯು ಉಪಯೋಗ ಪಶುವಿಗೆ ಹೋಗ್ತ. ಸ್ನೇಹ ಲಲಿತವನು, ತಿಳಿದವನು, ಸುಸಂಸ್ಕೃತ—ಈ ಪಶುವೃತ್ತಿ ತಕ್ಕುದೇ. ಒಪ್ಪುವುದೇ' ಎಂದು ಜ್ಞಾನಶಕ್ತಿ ಕೇಳಿತು.

ಕೇಶವಮೂರ್ತಿಗಳು ಮನಸ್ಸು ವಿಚಿತ್ರ ಅನುಭವಕ್ಕೊಳಗಾಯಿತು. ಹೃದಯದ ಮಂಥನ ಅವನನ್ನು ತಾತ್ಕಾಲಿಕವಾಗಿ ನೋಯಿಸಿತು. ಆದರೆ ಆ ನೋವು ನಾಳಿನ ಮಾರ್ಗದರ್ಶಕವಾಯಿತು.

೨೪

ಗೌರಿ ಈ ಸಂತೋಷದ ಸುದ್ದಿಯನ್ನು ತಾಯಿಯ ಕಿವಿಗೂ ಸೇರಿ ಹಾಕುವುದಕ್ಕೆ ತಡಮಾಡಲಿಲ್ಲ.

“ಈಗ ಸೀತಕ್ಕಾಂದ್ರೆ ಭಾವಯ್ಯನಿಗೆ ಬಹಳ ಮುಚ್ಚಟೆಯಾಗಿದೆ ಅಮ್ಮ. ಅವಳು ಏನು ಹೇಳಿದರೂ ಮಾಡುತ್ತಾರೆ.”

“ದೇವರು ದೊಡ್ಡವನು ಗೌರಿ. ನಮ್ಮ ಗೋಳು ಅವನ ಕಿವಿ ಮುಟ್ಟಿ ಹೋಂತ ಕಾಣತ್ತೆ.”

“ಭಾನುವಾರ ಸೀತಕ್ಕನ್ನ ಭಾವಯ್ಯ ನಮ್ಮ ಮನೆಗೆ ಬರುತ್ತಾರೆ. ನೀನೂ ಬರುತ್ತೀಯಾ ಅಮ್ಮ.”

“ಈಗ ಬೇಡ ಗೌರಿ. ಇಷ್ಟು ಅವಸರಪಡಬಾರದು. ಆ ಕಾಲ ಬರತ್ತೆ. ಆಗ ನಾನೂ ಬರುತ್ತೇನೆ.”

ಭಾನುವಾರವನ್ನು ಗೌರಿ ಚಾತಕಪಕ್ಷಿಯಂತೆ ನಿರೀಕ್ಷಿಸುತ್ತಿದ್ದಳು. ಸುಶೀಲ ಅವಳೂ ಕುಳಿತು ಏನುಏನು ಅಡಿಗೆಮಾಡಬೇಕು, ಯಾರುಯಾರಿಗೆ ಎಲ್ಲಿ ಎಲೆ ಹಾಕಬೇಕು ಮೊದಲಾದ ಎಲ್ಲ ವಿವರಗಳನ್ನೂ ಆಲೋಚಿಸಿದರು. ಸೀತಮ್ಮ ತಮ್ಮ ಇಬ್ಬರೂ ಸೊಸೆಯರಿಗೂ ಕೊಟ್ಟಿದ್ದ ಉಡುಗೊರೆ ಕಂಡು ಫಣಿಯಮ್ಮನೂ ಪ್ರಸನ್ನರಾದರು. ಬಂಗಾಳ ಸಿಲ್ಕು ಬದಲು ಧರ್ಮಾವರದ ಸೀರೆ ಕೊಟ್ಟಿದ್ದರೆ ಚೆನ್ನಾಗಿತ್ತು ಎಂದು ಅವರು ಅನ್ನದೆ ಬಿಟ್ಟಿರಲಿಲ್ಲ. ಆದರೆ ಅದನ್ನೇ ಕಾರಣಮಾಡಿಕೊಂಡು ಭಾನುವಾರದ ಔತಣ ಮುರಿಯುವುದಕ್ಕೆ ಅವರು ಯತ್ನಿಸಲಿಲ್ಲ.

ಭಾನುವಾರದ ಔತಣ ಗೌರಿ ನಿರೀಕ್ಷಿಸಿದಂತೆ ಸೊಗಸಾಗಿ ನಡೆಯಿತು.

ಸಕ್ಕರೆ ಒಬ್ಬಟ್ಟು, ನಿಂಬೇಹುಳಿ ಚಿತ್ರಾನ್ನ, ತಿಂಬೊಡೆ ಮಾಡಿ ಸೀತಮ್ಮ ಕೇಶವಯ್ಯನನ್ನು ಸತ್ಕರಿಸಿದರು. ವೆಂಕಟಲಕ್ಷ್ಮಮ್ಮನವರೂ ಪ್ಲಾಟ್‌ಫಾರ್ಮಿನಲ್ಲಿ ಕುಳಿತು ಎಲ್ಲರನ್ನೂ ಉಪಚರಿಸಿದರು.

ಸೀತಮ್ಮ ಹೊರಟಾಗ ಸುಶೀಲಾ ಅವರ ಕೈಗಿಟ್ಟು ಒಂದು ರವಿಕೆ ಕಣ ಒಪ್ಪಿಸಿದಳು. ಗೌರ ಮುಖ ಚಿಕ್ಕದು ಮಾಡಿಕೊಂಡು ನಿಂತಿದ್ದುದನ್ನು ಕಂಡು ಸೀತಮ್ಮ ಅವಳ ಹತ್ತಿರ ಬಂದು

"ಅಣ್ಣಾ ಒಂದು ಮಾತು ಹೇಳುತ್ತಿದ್ದರು ಗೌರ."

"ಏನದು ಅಕ್ಕ."

"ಪ್ರಪಂಚ ಒಂದು ರೈಲು ಇದ್ದ ಹಾಗೆ. ಜನ ರೈಲು ಹತ್ತುತ್ತಾರೆ. ಅಲ್ಲೇ ಪರಿಚಯ ಸ್ನೇಹವಾಗುತ್ತದೆ. ಅವರವರ ಸ್ಟೇಷನ್ ಬಂದಕೂಡಲೆ ಇಳಿದು ಹೊರಟುಹೋಗುತ್ತಾರೆ. ಪರಿಚಯ, ಸ್ನೇಹ ಮರೆತುಹೋಗುತ್ತದೆ."

"ನಮ್ಮದು ಹಾಗಲ್ಲವಲ್ಲ, ಸೀತಕ್ಕ. ನಾವೆಲ್ಲಾ ಒಂದೇ ಗಾಡಿಯಲ್ಲಿ ಕುಳಿತು ಒಂದೇ ಕಡೆಗೆ ಪ್ರಯಾಣ ಬೆಳೆಸುತ್ತಿದ್ದೇವೆ."

"ಒಂದೇ ಗಾಡಿ ನಿಜ. ಆದರೆ ಪ್ರಯಾಣ ಒಂದೇಕಡೆಗಲ್ಲ ಗೌರ. ನೀನೇಕೆ ಮುಖವನ್ನು ಚಿಕ್ಕದುಮಾಡಿಕೊಂಡಿದ್ದೀ?"

"ಅವಳು ಹೇಳಲ್ಲ, ನಾನು ಹೇಳುತ್ತೇನ್ರೀ ಸೀತಮ್ಮ."

"ಹೇಳಿ."

"ಬೇಡ ಸುಶೀಲಕ್ಕಾ, ಹೇಳಬೇಡ."

ಎಂದು ಗೌರ ಅಂಗಲಾಚಿದಳು. ಸುಶೀಲ ಅವಳ ಮಾತು, ಲಕ್ಷಿಸದೆ

"ಸೀತಕ್ಕನ ಹತ್ತಿರ ಮುಚ್ಚುಮರೆ ಎಂಥದಮ್ಮ. ಅವರು ಬೇರೆ, ನಾವು ಬೇರೆ ಎಂದು ನಾನು ತಿಳಿದುಕೊಂಡಿಲ್ಲ. ನೋಡಿ ಸೀತಕ್ಕ—ನಿಮಗೆ ಸೀರೆ ಉಡಿಸಬೇಕೂಂತ ನಾನೂ ಗೌರ ಪ್ರಯತ್ನಪಟ್ಟೆವು, ಸಾಧ್ಯವಾಗಲಿಲ್ಲ. ಗೋಪಾಳದ ರವಿಕೆ ಕಣ ಕೊಡಬೇಕಲ್ಲಾ ಎಂದು ಗೌರನಿಗೆ ವ್ಯಸನ."

"ಗೌರ, ನೀನು ಎಷ್ಟಾದರೂ ಚಿಕ್ಕವಳು. ನಾನು ನಿನ್ನ ಅಕ್ಕ. ನಿನಗೆ ನಾನು ಕೊಡಬೇಕಾದುದು ಧರ್ಮ. ನೀನು ಹೀಗೆಲ್ಲಾ ಯೋಚನೆ ಮಾಡುವ ಹಾಗಿದ್ದರೆ ನಾನು ತಿರುಗಿ ನಿಮ್ಮ ಮನೆಗೆ ಬರೋದಿಲ್ಲಮ್ಮ."

"ಇಲ್ಲ ಅಕ್ಕ. ಬಾಯಿಮಾತಿಗೂ ಹಾಗನ್ನಬೇಡ. ನಿನ್ನ ದಮ್ಮಯ್ಯ."

ಸೀತಕ್ಕ ಗೌರಿಯನ್ನಪ್ಪಿದಳು. ಸುಶೀಲಳ ಕಣ್ಣಲ್ಲಿ ನೀರೂರಿತು.

ಅವರು ಹೊರಟುಹೋದ ಮೇಲೂ ಗೌರಿ ಖಿನ್ನಳಾಗಿಯೇ ಇದ್ದಳು. ಆಕೆಯನ್ನು ಸಮಾಧಾನ ಮಾಡಲೆತ್ನಿಸಿ ಸುಶೀಲ ವಿಫಲಳಾದಳು.

ಗೌರಿ, ಶ್ರೀನಿವಾಸರ ಮನಸ್ಸಿನಲ್ಲಿ ದೊಡ್ಡ ಚಿಂತೆ ಹುಟ್ಟಿತ್ತು. ಶ್ರೀನಿವಾಸನ 'ರಿಸಲ್ಟ್' ಹೊರಬೀಳುವುದರಲ್ಲಿತ್ತು. ಅದರಲ್ಲಿ ಏನಾಗುತ್ತದೆಯೋ ಎಂಬ ಭಯ ಅವರನ್ನಾವರಿಸಿತ್ತು.

ಗೌರಿ ದೇವರನ್ನು ಒಂದೇ ಸಮನೆ ಪ್ರಾರ್ಥಿಸುತ್ತಿದ್ದಳು. ಗಂಡನಿಗೆ ಪಾಸಾಗಲೆಂದು ಶನಿವಾರ, ಸೋಮವಾರ ಒಪ್ಪತ್ತು ಮಾಡುತ್ತಿದ್ದಳು. ದೇವರಿಗೆ ತುಪ್ಪದ ದೀಪ ಹಚ್ಚುತ್ತಿದ್ದಳು. ಅವಳ ಧಾವಂತ ನೋಡಿ ಸುಶೀಲ ಮರುಗುತ್ತಿದ್ದಳು. 'ಇಷ್ಟು ಚಿಕ್ಕ ವಯಸ್ಸಿನಲ್ಲಿ ಇಷ್ಟು ಚಿಂತೆಯೇ' ಎಂದು ದುಃಖಿಸುತ್ತಿದ್ದಳು.

ರಿಸಲ್ಟ್ ಅಂದು ಹನ್ನೊಂದು ಗಂಟೆಗೆ ಪ್ರಕಟವಾಗುತ್ತದೆಂದು ತಿಳಿದು ಬಂತು. ಗೌರಿ ಐದು ಗಂಟೆಗೇ ಎದ್ದು ತುಳಸೀಪೂಜೆ ಮಾಡಿ, ದೇವರಿಗೆ ಗರಿಲ ನಮಸ್ಕಾರ ಹಾಕಿ ಬೇಗ ಅಡಿಗೆಮಾಡಿ ಮುಗಿಸಿದಳು

"ಇಷ್ಟು ಬೇಗ ಊಟ ಏಕೆ? ರಿಸಲ್ಟ್ ನೋಡಿಬಂದು ಊಟಮಾಡು ತ್ತೇನೆ."

ಎಂದ ಶ್ರೀನಿವಾಸ. ಅವನು ಏನೇ ನೆಬೂಬು ಹೇಳಿದರೂ ಕೇಳದೆ ಗೌರಿ ಅವನಿಗೆ ಬಡಿಸಿ ಊಟಮಾಡಿಸಿ ಕಳುಹಿಸಿಕೊಟ್ಟಳು. ಹೊರಡುವ ಮುನ್ನ ಗಂಡನನ್ನು ಹತ್ತಿರ ಕರೆದು

"ದೇವರಿಗೆ ನಮಸ್ಕಾರಮಾಡಿ ಹೋಗಿ ಬನ್ನಿರಿ."

ಅವನು ನಮಸ್ಕಾರ ಹಾಕಿ ಬಂದ.

"ಅತ್ತೆಮ್ಮ ಮಾವಂದಿರಿಗೂ ನಮಸ್ಕಾರಮಾಡಿ ಬನ್ನಿ."

ಎಂದಳು. ಶ್ರೀನಿವಾಸ ಉಸಿರೆತ್ತದೆ ಹೆಂಡತಿ ಹೇಳಿದಂತೆ ಮಾಡಿ ಹೊರಟ.

ಮನೆಯಲ್ಲಿ ಎಲ್ಲರ ಊಟವೂ ಆಯಿತು, ಸುಶೀಲ ಎಷ್ಟು ಹೇಳಿದರೂ

"ಅವರು ಬಂದುಬಿಡಲಿ. ಆಮೇಲೆ ಊಟಮಾಡುತ್ತೇನೆ."

ಎಂದು ಗೌರಿ ಹೇಳಿದಳು. ಗಂಟೆ ಒಂದಾಯಿತು—ಎರಡಾಯಿತು—ಮೂರಾಯಿತು. ಫಣಿಯಮ್ಮನವರೇ ಸ್ವತಃ ಬಂದು ಗೌರಿಯನ್ನು ಊಟಕ್ಕೆಬ್ಬಿಸಿದರು.

"ಅವರು ಬಂದುಬಿಡಲಿ ಅತ್ತೇ. ನನಗೆ ಈಗಲೇ ಹಸಿವಿಲ್ಲ."

"ಎಷ್ಟು ಹೊತ್ತಾಗತ್ತೋ ಏನೋ ನೀನು ಊಟಮಾಡಿ ಕುಳಿತುಕೊಳ್ಳಬಾರದೇ."

"ಇಲ್ಲ ಅತ್ತೇ, ಅವರು ಬರಲಿ"

ಎಂದು ಹೇಳಿದಳು. 'ನಿನ್ನ ಗ್ರಹಚಾರ' ಅಂದುಕೊಂಡು ಫಣಿಯಮ್ಮ ಹೊರಟುಹೋದರು.

ನಾಲ್ಕುಗಂಟೆಯ ಸಮಯ. ಬೇಸಿಗೆಯ ಬಿಸಿಲು ಸುಡುತ್ತಿತ್ತು. ಶ್ರೀನಿವಾಸ ಬರುತ್ತಿರುವ ರೀತಿಯನ್ನು ಕಂಡಾಗಲೇ ಗೌರಿಯ ಎದೆ ಹೊಡೆದುಕೊಳ್ಳಲಾರಂಭಿಸಿತು.

ಅವನು ಒಳಕ್ಕೆ ಬಂದ. ತೊಟ್ಟಿಯಲ್ಲಿಯೇ ಕುಳಿತಿದ್ದ ವೆಂಕಟಾಚಲಯ್ಯ

"ಏನಾಯಿತಯ್ಯಾ?" ಎಂದರು.

"ಹೋಯಿತು" ಎಂದ.

"ಗ್ರೂಪೂ ಆಗಲಿಲ್ಲವೇ?"

"ಒಂದು ಗ್ರೂಪಾಯಿತು"

ಎಂದು ತನ್ನ ಕೋಣೆ ಹೊಕ್ಕ. ಅವನ ಮಾತು ಗೌರಿ, ಸುಶೀಲ ಕೇಳಿಸಿಕೊಂಡರು. ಗೌರಿ ಕಣ್ಣಲ್ಲಿ ಧಾರಾಕಾರವಾಗಿ ನೀರು.

"ಇಷ್ಟು ಮನಸ್ಸಿಗೆ ಹಚ್ಚಿಕೊಂಡರೆ ಹೇಗೆ ಗೌರಿ. ಫಾಸು ಫೇಲು ಯಾರಧೀನ. ಇನ್ನೊಂದು ಸಲ ಪಾಸಾಗತ್ತೆ."

"ಅಕ್ಕ...."

ಗೌರಿಯ ಬಾಯಲ್ಲಿ ಮಾತು ಹೊರಡಲಿಲ್ಲ. ಸುಶೀಲ ಬಂದು ಎಲೆ ಹಾಕಿ ಬಲವಂತವಾಗಿ ಅವಳನ್ನು ಅದರ ಮುಂದೆ ಕೂಡಿಸಿದಳು. ಎರಡು ತುತ್ತು ಬಾಯಿಗಿಟ್ಟುಕೊಂಡು ಗೌರಿ ಎದ್ದುಬಿಟ್ಟಳು.

ಫಣಿಯಮ್ಮ ಮನೆಯೊಳಗೆ ಕಾಲಿಡುತ್ತಿರುವಾಗಲೆ ವೆಂಕಟಾಚಲಯ್ಯ

"ಕೇಳಿದೆಯೇನೆ—ನಿನ್ನ ಮಗನ ರಿಸಲ್ಟು ?" ಎಂದರು.

"ಏನಾಯಿತು ?"

"ಡುಂ ಅಂದುಹೋಯಿತು."

"ಹೌದೇನೊ ಶೀನೂ...."

"ಅವನ್ನೇನು ಕೇಳುತ್ತೀ, ನಾನು ಸುಳ್ಳು ಹೇಳುತಿದ್ದೇನೆಯೇ ?"

"ಅಯ್ಯೋ ರಾಮ...."

ಎಂದು ತಲೆಯ ಮೇಲೆ ಕೈಹೊತ್ತು ಕುಳಿತರು.

"ಯಾಕೋ ಅವನ ಗ್ರಹಬಲ ಚೆನ್ನಾಗಿಲ್ಲ" ಎಂದರು ವೆಂಕಟಾಚಲಯ್ಯ.

"ಅವನ ಗ್ರಹಬಲಕ್ಕೇನು ಬಂತು ಧಾಡಿ, ಅದು ಚೆನ್ನಾಗಿಯೇ ಇದೆ. ಅವನಿಗೆ ಮದುವೆಮಾಡಿದ ಹೊತ್ತು ಒಳ್ಳೆಯದಲ್ಲ. ಮಹಾತಾಯಿ ಯಾವ ಹೊತ್ತಿನಲ್ಲಿ ಅವನ ಕೈಹಿಡಿದಳೋ!...."

"ಅದಕ್ಕೂ ಇದಕ್ಕೂ ಏನೇ ಸಂಬಂಧ."

"ಸಾಕು ಸುಮ್ಮನಿರೀಂದ್ರೆ. ನಿಮಗೇನು ಗೊತ್ತಾಗತ್ತೆ. ಒಂದೊಂದು ಸಂಬಂಧ ಮಾಡಿದರೆ ಹೀಗೇ ಆಗೋದು. ಈ ಮೂದೇವಿ ಬೇಡ ಎಂತ ನಾನು ಬಡ್ಕೊಂಡೆ ಆ ಶಾನುಭೋಗನ ಬೇಳ್ವೆ ಮಾತಿಗೆ ಬೆರಗಾದಿರಿ."

"ನೀನು ಒಪ್ಪದೆ ನಾನೇ ಎಲ್ಲಾ ಮಾಡಿದೆನೆ ?"

"ನೀವು ಮಾತುಕೊಟ್ಟು ಸಿಕ್ಕಿಹಾಕಿಕೊಂಡು ಕಣ್ಣುಕಣ್ಣು ಬಿಡುತ್ತಿದ್ದರೆ ನಾನೇನು ಮಾಡುವುದಕ್ಕಾಗುತ್ತೆ."

"ಆಗಿಹೋದ ಮಾತು ಕಟ್ಟಿಕೊಂಡು ಈಗೇಕೆ ವ್ಯಾಜ್ಯ."

"ಎಲ್ಲಿ ಆಗಿಹೋಯಿತು. ಈ ಜಪ್ಪೆಯಿಂದ ಇನ್ನೂ ಏನೇನು ಅನಿಷ್ಟಗಳಾಗುತ್ತವೋ ?"

"ಶೀನೂ ಓದ್ದೇ ಫೇಲಾದರೆ ಗೌರಿ ಏನು ಮಾಡುತ್ತಾಳೆಯೇ !"

"ಅವನು ಓದಲಿಲ್ಲಾಂತ ಹೇಳೋದಿಕ್ಕೆ ನಿಮಗೆ ಬಾಯಿ ಹೇಗೆ ಬರತ್ತೇಂದ್ರೆ. ನೀವೇ ಕೊಟ್ಟದ್ದೀರಿ ಹತ್ತುಹತ್ತು ರೂಪಾಯಿ ಲೈಟ್‌ಬಿಲ್ಲು ಎರಡು ತಿಂಗಳಿಂದ. ಗ್ರಹಚಾರ ಕಾಡುತ್ತಿದ್ದರೆ ಅವನು ಎಷ್ಟು ಓದಿ ತಲೆ ಚಚ್ಚಿಕೊಂಡರೆ ತಾನೆ ಏನು ಪ್ರಯೋಜನ."

"ಹೋಗಲಿ ಬಿಡು. ಹುಡುಗಿ ಕಿವಿಗೆಲ್ಲಾದರೂ ಬಿದ್ದೀತು."

"ಬೀಳಲಿ. ನನಗೇನು ಭಯವೇ? ಸಾನಿನ್ನೂ ಅವಳ ಅಡ್ಡಿ ಆತಂಕದ ಕೆಳಗೆ ಬಿದ್ದಿಲ್ಲ."

"ಬಾಯಿ ಮುಚ್ಚುತೀಯೋ ಇಲ್ಲವೇ?"

"ಇದೇನೂಂದ್ರೆ—ನೀವು ಹೀಗೆ ರೇಗಾಡ್ತೀರಿ. ಆ ಮೂದೇವಿ ತಪ್ಪಿಗೆ ನಾನು ಹೊಣೆಯೇ? ಚೆನ್ನಾಗಿದೆ."

ಇನ್ನು ಮಾತು ಬೆಳಸಿ ಪ್ರಯೋಜನವಿಲ್ಲವೆಂದು ವೆಂಕಟಾಚಲಯ್ಯ ಅಲ್ಲಿಂದೆದ್ದು ಹೊರಗೆ ಹೊರಟು ಹೋದರು.

ಅತ್ತೆಯ ಮಾತು ಕೇಳಿ ಸುಶೀಲ, ಗೌರಿ ಗಡಗಡ ನಡುಗಿದರು. ಇನ್ನು ಈ ಮನೆಯಲ್ಲಿ ತನಗೆ ಉಳಿಬಾಳಿಲ್ಲವೆಂದು ಗೌರಿ ನಿರ್ಧರ ಮಾಡಿಕೊಂಡಳು.

ಫಣಿಯಮ್ಮನ ಅವತಾರವೇ ಅಂದಿನಿಂದ ಬದಲಾಯಿಸಿತು. ಮಾತು ಮಾತಿಗೂ ಗೌರಿಯನ್ನು ಆಕ್ಷೇಪಿಸುತ್ತಿದ್ದರು. ಅವಳ ಕೆಲಸ ಕಾರ್ಯ ಯಾವುದೂ ಅವರಿಗೆ ತೃಪ್ತಿಯನ್ನುಂಟುಮಾಡುತ್ತಿರಲಿಲ್ಲ 'ಮೂದೇವಿ—ಶನಿ ಪಿಶಾಚಿ—ಚಂಡಾಲಿ ಶಬ್ದಗಳು ಧಾರಾಕಾರವಾಗಿ ಅವರ ಬಾಯಿಂದ ಹೊರಡುತ್ತಿದ್ದವು. ಒಳಗೆ ತೆಪ್ಪಗೆ ಅವಳು ಕುಳಿತಿದ್ದರೆ

"ಮನೆ ತೊಳೆದಾಯ್ತಲ್ಲಾ. ಇನ್ನೇನು ಹೊಂಚುಹಾಕುತ್ತಾ ಇದ್ದೀ."

ಅನ್ನುತ್ತಿದ್ದರು ಕ್ಷಣಹೊತ್ತು ಹೊರಗೆ ಬಂದು ನಿಂತರೆ

"ಯಾವ ತಲೆಮಾಸಿದೋನಿಗೆ ಕಾಯುತ್ತಾ ಇದ್ದೀಯೆ."

ಎನ್ನುತ್ತಿದ್ದರು. ಊಟಕ್ಕೆ ಕುಳಿತರೆ

"ತಿನ್ನು ತಿನ್ನು ಹೆಮ್ಮಾರಿ. ಮನೆಯಕ್ಕಿಯೆಲ್ಲಾ ನಿನ್ನ ಹಾಳೊಡಲು ತುಂಬುವುದಕ್ಕೇ ಸಾಲದು."

ಎನ್ನುತ್ತಿದ್ದರು. ಊಟ ಬಿಟ್ಟರೆ

"ಅಘತ್ಯಮಾಡುತ್ತೀಯಾ. ನಮ್ಮ ಅತ್ತೆ ಅನ್ನ ಹಾಕದೆ ಸಾಯಿಸಿದಳು ಅಂತ ಊರಿನಲ್ಲಿ ಸಾರಿಕೊಂಡು ಬರುವುದಕ್ಕೆ."

ಎಂದು ಆಕ್ಷೇಪಿಸುತ್ತಿದ್ದರು. ಅವರ ಬಾಯಿ ಮುಂದೆ ನಿಲ್ಲುವ ಧೈರ್ಯ ಮನೆಯಲ್ಲಿ ಯಾರಿಗೂ ಇರಲಿಲ್ಲ.

ಗೌರಿ ಮನೋರೋಗ ಹಚ್ಚಿಕೊಂಡು ದಿನದಿನಕ್ಕೆ ಸೊರಗುತ್ತ ಬಂದಳು. ಸುಶೀಲನಿಗೆ ಏನುಮಾಡುವುದಕ್ಕೂ ತೋರಲಿಲ್ಲ. ಅವಳ ಆದರ, ಸಮಾಧಾನದ ಮಾತುಗಳ ಎಲ್ಲೆಯನ್ನು ಮೀರಿತ್ತು ಗೌರಿ ದುಃಖ. 'ನಾಲ್ಕು ದಿನ ಅವಳ ತೌರುಮನೆಗೆ ಹೋಗಿಯಾದರೂ ಬರಲಿ' ಎಂದು ಯೋಚಿಸಿ ಸುಶೀಲ ಅದನ್ನು ತನ್ನ ಗಂಡನ ಹತ್ತಿರ ಪ್ರಸ್ತಾಪಿಸಿದಳು. ನರಸಿಂಹಮೂರ್ತಿ ಹೆದರಿಕೊಂಡೇ ತಾಯಿಯ ಹತ್ತಿರ ಹೇಳಿದ ಫಣಿಯಮ್ಮ ಕೇಳಿ

"ತೌರುಮನೆ ಒಂದು ಕೇಡು. ಬಿದ್ದಿರಲಿ ಇಲ್ಲೇ."

ಎಂದರು. ಸುಶೀಲಾ ಕಿಡಿಕಿಡಿಯಾದಳು. ಆದರೆ ಮಾಡುವುದೇನು?

ಶ್ರೀನಿವಾಸ ಹೆಂಡತಿಯ ಸ್ಥಿತಿಯನ್ನು ನೋಡುತ್ತಿದ್ದ. ಆದರೆ ತಾಯಿಯ ಎದುರು ನಿಲ್ಲುವ ಧೈರ್ಯ ಅವನಲ್ಲಿರಲಿಲ್ಲ. ಸೆಪ್ಟೆಂಬರ್ ಪರೀಕ್ಷೆಯ ಸಿದ್ಧತೆ, ಕೆಲಸಕ್ಕೆ ಅರ್ಜಿಕೊಟ್ಟ ಸಂಬಂಧಪಟ್ಟ ಅಧಿಕಾರಿಗಳನ್ನು ಹೋಗಿ ಕಂಡುಬರುವುದರಲ್ಲಿ ಅವನು ಮನೆಯಲ್ಲಿ ಹೆಚ್ಚುಹೊತ್ತು ನಿಲ್ಲುತ್ತಲೂ ಇರಲಿಲ್ಲ. ಮನೆಯಲ್ಲಿ ಓದು ಸಾಗುವುದಿಲ್ಲವೆಂದು ಗೆಳೆಯನ ರೂಮಿನಲ್ಲಿ ವ್ಯಾಸಂಗಮಾಡುತ್ತಿದ್ದ.

ಐದು ತಿಂಗಳಲ್ಲಿ ಗೌರಿಗೆ ಐವತ್ತು ವರ್ಷದ ಬಾಳಿನ ಕಹಿ ಅನುಭವ ಬಂತು. ಅವಳ ಮಧುರಮುಖದಿಂದ ನಗೆ ಮಾಸಿಹೋಯಿತು. ಕಣ್ಣುಗಳು ಅತ್ತು ಅತ್ತು ಕಾಂತಿಹೀನವಾದವು. ಕಣ್ಣುಗಳ ಕೆಳಗೆ ಗುಣಿಗಳು. ದೇಹ ಕೃಶವಾಯಿತು. ಗುರುತು ಸಿಕ್ಕಲಾರದಷ್ಟು ಮಾರ್ಪಾಟು ಅವಳಲ್ಲಾಯಿತು. ಅತ್ತೆಯ ಮನೆಯಲ್ಲಿ ಒಂದೊಂದು ದಿನ ಕಳೆಯುವುದೂ ಒಂದೊಂದು ಗಂಡಾಂತರ ಕಳೆದಂತಾಗುತ್ತಿತ್ತು.

ಈ ಹೊತ್ತಿನಲ್ಲಿ ಗಂಡನ ಸಹವಾಸ, ಸವಿಮಾತುಗಳನ್ನು ಆ ಜೀವ ಬಯಸುತ್ತಿತ್ತು. ಗಂಡ ಪರೀಕ್ಷೆಗೆ ಓದಿ ಕಂಗೆಟ್ಟಿದ್ದ. ಈಗ ವಿಶ್ರಾಂತಿ ತೆಗೆದುಕೊಳ್ಳುವುದರಲ್ಲಿ ನಿರತನಾಗಿದ್ದ.

ಶ್ರೀನಿವಾಸನಿಗೆ ಜೀವನವೇ ನೀರಸವಾಗಿತ್ತು. ಪರೀಕ್ಷೆಯಲ್ಲಿ ಹೋದುದು ಅವನ ಮನಸ್ಸಿನ ಮೇಲೆ ಕೆಟ್ಟ ಪರಿಣಾಮವನ್ನುಂಟುಮಾಡಿತ್ತು. ಜತೆಗೆ ತನ್ನ ಭವಿಷ್ಯ ಇಲ್ಲಿಗೆ ಮುಗಿಯಿತೆಂಬ ಚಿಂತೆ. ಎರಡನೆಯ ಪರೀಕ್ಷೆಯಲ್ಲಿಯೂ ತಾನು ನಾಪಾಸಾದರೆ ಗತಿಯೇನು ಎಂಬ ಯೋಚನೆ ಬೇರೆ ಅವನನ್ನು ಕಾಡು

ತ್ತಿತ್ತು. ಅವನ ಮನಸ್ಸನ್ನು ಬೇರೊಂದು ಕೀಟ ಕೊರೆಯುತ್ತಿತ್ತು. ಅದನ್ನು ಗೌರಿಯಲ್ಲಿ ಪ್ರಸ್ತಾಪಿಸಲು ನಿರ್ಧರಿಸಿದ.

ರಾತ್ರಿ ಎಲ್ಲರ ಊಟವಾದ ಮೇಲೆ ಕಸಮುಸರೆ ಮುಗಿಸಿಕೊಂಡು, ಬೆಳಿಗ್ಗೆ ಒಲೆಹೊತ್ತಿಸುವುದಕ್ಕೆ ಕಟ್ಟಿಗೆ ಸಿದ್ಧಗೊಳಿಸಿ ಗೌರಿ ಮಲಗುವುದಕ್ಕೆ ಹೋಗಬೇಕಾದರೆ ಹನ್ನೊಂದು ಹೊಡೆದುಹೋಗಿರುತ್ತಿತ್ತು. ಅಷ್ಟು ಹೊತ್ತಿಗೆ ಶ್ರೀನಿವಾಸ ಸುಖನಿದ್ರೆಯಲ್ಲಿರುತ್ತಿದ್ದ. ಅವನು ಬೆಳಿಗ್ಗೆ ಏಳುವ ಮುನ್ನ ಗೌರಿ ಎದ್ದುಬರುತ್ತಿದ್ದಳು. ಹೀಗಾಗಿ ಅನೇಕ ದಿವಸ ಗಂಡ ಹೆಂಡತಿ ಮಾತನಾಡುವ ಅವಕಾಶ ಕೂಡ ಸಿಕ್ಕಿರಲಿಲ್ಲ. ಮಾತನಾಡುವ ಅವಕಾಶವಿದ್ದರೂ ಸಾಧ್ಯವಿರಲಿಲ್ಲ. ಫಣಿಯಮ್ಮ ತೊಟ್ಟಿಯಲ್ಲಿ ಹಾಸಿಕೊಂಡು ಮಲಗುತ್ತಿದ್ದರು. ರೂಮಿನಲ್ಲಿ ಸ್ವಲ್ಪ ಧನಿಯಾದರೂ ಅವರು ಹೊರಗೆ ಚಿಟಗುಟ್ಟುವುದಕ್ಕೆ ಆರಂಭಿಸುತ್ತಿದ್ದರು.

ಒಂದು ರಾತ್ರಿ ಗೌರಿ ತನ್ನ ನಿಯತವೇಳೆಗೆ ರೂಮು ಸೇರಿದಳು. ಶ್ರೀನಿವಾಸ ಎಚ್ಚರವಾಗಿಯೇ ಕುಳಿತಿದ್ದ. ಹೆಂಡತಿಯನ್ನು ದಿಟ್ಟಿಸಿ ನೋಡಿ

"ಹನ್ನೊಂದು ಗಂಟೆಗೆ ಮುಂಚೆ ನಿನ್ನ ಕೆಲಸ ಮುಗಿಯುವ ಹಾಗೇ ಇಲ್ಲ."

"ನಾನೇನು ಮಾಡಲಿ. ಎಷ್ಟು ಬೇಗ ಮುಗಿಸಬೇಕೆಂದರೂ ಹೊತ್ತಾಗುತ್ತದೆ."

"ನಿನ್ನ ಕೈಯಲ್ಲಿ ಮಾತನಾಡುವುದಕ್ಕೂ ನಾನು ತಿಂಗಳುಗಟ್ಟಲೆ ತಪಸ್ಸು ಮಾಡಬೇಕು."

"ಪರೀಕ್ಷೆ ರಿಸಲ್ಟು ಯಾವಾಗ ಬರುತ್ತದೆ."

"ಇನ್ನು ನಾಲ್ಕೈದು ದಿವಸದಲ್ಲಿ."

"ಈ ಸಲ ಭಯವಿಲ್ಲವಷ್ಟೇ."

"ಇಲ್ಲ ಎಂದು ಕಾಣುತ್ತದೆ."

"ಈ ಸಲವೂ ನೀವು ಪಾಸಾಗದಿದ್ದರೆ ಅತ್ತೆ ಬಹಳ ಕೋಪಮಾಡಿಕೊಳ್ಳುತ್ತಾರೆ."

"ನಿನಗೆ ಕೋಪ ಬರುವುದಿಲ್ಲವೇ ?"

"ನಿಮಗೇಕೆ ಕೋಪ ಬರಬೇಕು. ಕಷ್ಟಪಟ್ಟು ಓದಿರುತ್ತೀರಿ. ಅಳ ಸ್ಮಾತ್ರಾಗಿ ಹೋಗುತ್ತದೆ ಅದಕ್ಕೆ ಯಾರು ಹೊಣೆ."

"ಈಗಲೇ ನೌಕರಿ ಮಾಡುವುದು ನನಗೆ ಸ್ವಲ್ಪವೂ ಇಷ್ಟವಿಲ್ಲ ಗೌರಿ."

"ನನಗೂ ಇಷ್ಟವಿಲ್ಲ. ಆದರೇನು ಮಾಡುವುದು?"

"ನೀನು ಗಟ್ಟಿ ಮನಸ್ಸು ಮಾಡಿದರೆ ಏನಾದರೂ ಮಾಡಬಹುದು."

"ನನ್ನಿಂದ ಏನು ಸಾಧ್ಯ ಹೇಳಿ."

"ನಿಮ್ಮ ತಂದೆ ಸಹಾಯಮಾಡಿದರೆ ನಾನು ಎಲ್.ಎಲ್.ಬೀಗೆ ಹೋಗಬಹುದು."

ಗೌರಿ ಭೂಮಿಗಿಳಿದು ಹೋದಳು. ಶ್ರೀನಿವಾಸನ ಪ್ರಶ್ನೆಗೆ ಏನು ಉತ್ತರಕೊಡಬೇಕೆಂಬುದು ಅವಳಿಗೆ ತಿಳಿಯಲಿಲ್ಲ.

"ಯಾಕೆ ಗೌರಿ ಸುಮ್ಮನಾದೆ. ಏನಾದರೂ ಹೇಳು."

"ಏನು ಹೇಳಲಿ. ನಿಮಗೆ ತಿಳಿಯದೆ ಇರುವುದು ಯಾವುದೂ ಇಲ್ಲ."

"ಹಾಗಂದರೆ?"

"ನಮ್ಮ ತಂದೆ ಇಂದು ನಿರ್ಗತಿಕರು."

"ಇದುವರೆಗೆ ಸಂಪಾದನೆ ಮಾಡಿದ್ದು ಏನಾಯ್ತು."

"ಇತರರ ಹಾಗೆ ಲಂಚಹೊಡೆದು ಅವರು ಸಂಪಾದನೆಗೆ ಹೊರಡಲಿಲ್ಲ. ಬರುತ್ತಿದ್ದ ಸಂಬಳದಲ್ಲಿ ತೃಪ್ತಿಪಟ್ಟುಕೊಂಡು ಮರ್ಯಾದೆಯಾಗಿ ಜೀವನ ಮಾಡುತ್ತಿದ್ದರು."

"ಏನೂಯಿಲ್ಲದೆ ನಮ್ಮ ಮದುವೆ ಮಾಡಿದರೂ?"

"ಅದರ ಕಥೆ ಹೇಳಿದರೆ ನಿಮಗೆ ಕೋಪಬರುತ್ತದೆ."

"ಚಿಂತೆಯಿಲ್ಲ ಹೇಳು."

"ಇದ್ದ ಒಂದು ಜಮೀನು ಮಾರಿ ನನ್ನ ಮದುವೆ ಮಾಡಿದರು. ಅದರ ಮೇಲೆ ಸಾಲವೂ ಮಾಡಿದ್ದಾರೆ. ಇವತ್ತು ಸಂಸಾರ ನಡಸಿಕೊಂಡು ಹೋಗುವುದೇ ಒಂದು ದೊಡ್ಡ ಭಾರವಾಗಿದೆ ಅವರಿಗೆ. ಯಾವ ಮುಖದಲ್ಲಿ ಅವರನ್ನು ಹಣ ಕೇಳಲಿ."

"ಒಳ್ಳೇ ದರಿದ್ರಲಕ್ಷ್ಮೀ ಕೈಹಿಡಿದ ಹಾಗಾಯಿತು ನಾನು."

ಎಂದು ವ್ಯಗ್ರನಾಗಿ ಹೊರಬಿದ್ದ. ತಾಯಿ ಕೇಳಿದರು

"ಏಕೋ ಮಗು ಎದ್ದೆ."

"ಒಳಗೆ ಶಖೆಯಮ್ಮ—ನಿದ್ದೆ ಬರಲಿಲ್ಲ."

"ಬಾ ಇಲ್ಲೀ—ತೊಟ್ಟಿಯಲ್ಲೀ ಹಾಸಿಕೊಂಡು ಮಲಗಿಕೋ."

ಶ್ರೀನಿವಾಸ ಬಾಯಿ ಮಾತು ಮೀರಲಿಲ್ಲ.

ರಾತ್ರಿ ಗೌರಿಗೆ ನಿದ್ದೆ ಹತ್ತಲಿಲ್ಲ. ತಲೆದಿಂಬು ನೆನೆದು ಒದ್ದೆಮುದ್ದೆಯಾಗಿತ್ತು. ಮೈ ಕಾದಕೆಂಡದಂತಾಯಿತು.

೧೫

ಒಂದು ವಾರ ಕಳೆದಾನಂತರ ಶ್ರೀನಿವಾಸನ ರಿಸಲ್ಟ್ ಹೊರಬಿತ್ತು. ದೇವರ ದಯೆಯಿಂದ ಅವನು ಪಾಸಾಗಿದ್ದ. ಮೊದಲೇ ಹರಸಿಕೊಂಡಿದ್ದಂತೆ ಗೌರಿ ದೇವರ ಎರಡು ಪಾದಗಳ ಮೇಲೆ ಎರಡು ಕಾಯಿ ಒಡೆದಳು. ಅವಳ ಮನಸ್ಸು ತುಸು ಹಗುರವಾಯಿತು ಒಳಗೆ ಹುದುಗಿದ್ದ ಸಂಕಟವನ್ನೂ ಮರೆತು ನಗುಮುಖ ತೋರಿದಳು. ಸುಶೀಲ ಅದನ್ನು ಕಂಡು

"ಗೌರೀ, ನೀನು ಅತ್ತರೂದರೂ ನಾನು ನೋಡಬಲ್ಲೆ. ಈ ನಗುಮುಖ ನೋಡಲಾರೆನಮ್ಮ."

"ಯಾಕೆ ಅಕ್ಕ. ನನಗೆ ನಗುವುದಕ್ಕೆ ಬರುವುದಿಲ್ಲವೇ ?"

"ನೀನು ಮೊದಲು ಮಕ್ಕಳಂತೆ ಕಿಲಕಿಲನೆ ನಗುವುದನ್ನು ಕಂಡು ನಾನು ಅಸೂಯೆಪಡುತ್ತಿದ್ದೆ. ಈಗ ನಿನ್ನ ನೋಡಿ ಕರುಳು ಕಿತ್ತುಬರುತ್ತದೆ. ಏಕೋ ಕೊರಗುತ್ತಾ ಇದ್ದೀ. ನನ್ನಲ್ಲಿ ಹೇಳಬಾರದೇ ?"

"ಏನು ಹೇಳಲಿ ಅಕ್ಕ. ನಿಜವಾಗಿಯೂ ಏನೂ ಇಲ್ಲವಲ್ಲಾ."

"ಹೋಗಲಿ, ಬಿಡಮ್ಮ."

ಎಂದಳು.

ಅರ್ಜಿ ಕೊಡುವುದು, ಬಂದು ನೋಡೆಂದು ಬರೆದವರನ್ನು ಹೋಗಿ ನೋಡಿ ಸಪ್ಪೆ ಮೋರೆ ಹಾಕಿಕೊಂಡು ಬರುವುದು ಶ್ರೀನಿವಾಸನ ಜೀವನದಲ್ಲಿ ಅವ್ಯಾಹತವಾಗಿ ನಡೆದಿತ್ತು. ಅವನಿಗೆ ಕೆಲಸ ಸಿಕ್ಕದಿದ್ದುದೂ ಗೌರಿಯ ದುರದೃಷ್ಟದಿಂದಲೇ ಎಂದು ಫಣಿಯಮ್ಮನ ತರ್ಕ. ಅದಕ್ಕೂ ಅವಳಿಗೆ ಸಾಕಷ್ಟು ಮಂಗಳಾರತಿ ಆಯಿತು.

ಒಂದು ದಿನ ಮಾತಿಗೆ ಮಾತು ಬೆಳೆದು ಫಣಿಯಮ್ಮ ಗೌರಿ ತಾಯಿ ತಂದೆಯನ್ನು ಮನಸ್ವೀ ನಿಂದಿಸಿದರು. ಅವರ ಹೀನ ನುಡಿಗಳನ್ನು ಕೇಳಿಕೇಳಿ ಗೌರಿಗೆ ರೋಸಿತು. ಅತ್ತೆಯ ಮಾತು ಅಶ್ಲೀಲ ಸೀಮೆ ಮುಟ್ಟಿದಾಗ

"ಅತ್ತೇ—ನನ್ನ ಬೇಕಾದ್ದು ಅನ್ನಿ—ನಮ್ಮ ತಾಯಿತಂದೆ ಹೆಸರು ಎಳೆಯಬೇಡಿ. ದೇವರ ಹೆಸರು ಹೇಳಿಕೊಂಡು ಅವರೆಲ್ಲಿಯೋ ಇದ್ದಾರೆ" ಎಂದಳು.

ಫಣಿಯಮ್ಮ ಉರಿದುಬಿಟ್ಟರು. ತನ್ನನ್ನೆದುರಿಸುವವರೆಗೆ ಗೌರಿ ತಯಾರಾದಳಲ್ಲಾ ಎಂಬ ಕೋಪ ಅವರನ್ನು ವ್ಯಾಪಿಸಿತು. ಕೆಂಗಣ್ಣು ಮಾಡಿಕೊಂಡು

"ದರಿದ್ರರಂಡೇ—ನಂಗೇ ಬುದ್ಧಿ ಹೇಳುತ್ತೀಯಾ. ಆ ಭಡವ, ನಿಮ್ಮಪ್ಪ ಅವನೊಬ್ಬ ದೊಡ್ಡಮನುಷ್ಯ. ಆ ಮೂಳಿ ನಿಮ್ಮಮ್ಮ ಅವಳೊಬ್ಬಳು ಮಹಾ ಅರುಂಧತಿ, ಸಾಕು ಮುಚ್ಚೇಬಾಯಿ."

"ಈಗ ಬಾಯಿ ಮುಚ್ಚಬೇಕಾದವರು ನೀವು. ಆಡುವ ಮಾತಿನ ಅರ್ಥ ಕೂಡ ತಿಳಿಯದೆ ಮಾತಾಡುತ್ತಿರುವಿರಿ."

"ನಾನೇ—ನಾನೇ—ಹೀನಮುಂಡೇದೇ—ಗೂಬೆಮುಂಡೇದೆ—ಮನೆ ಹಾಳು ಮುಂಡೇದೇ—ನಮ್ಮ ಮನೆ ತೊಳೆಯುವುದಕ್ಕೆ ಬಂದೆಯಲ್ಲೇ. ಶೀನು ಬಾಳಿಗೆ ಬರೆ ಹಾಕಿದೆಯಲ್ಲೇ."

ಎಂದು ಅಬ್ಬರಿಸಿದರು. ಅವರ ಆರ್ಭಟ ಕೇಳಿದ ಸುಶೀಲ ಗಾಬರಿಯಾಗಿ ಹೊರಬಂದು

"ಹೋಗಲಿ ಒಳಗೆ ಬಾ ಗೌರಿ."

"ತಡೀರಿ ಅಕ್ಕ. ಇವರ ಬಾಯಲ್ಲಿ ಇನ್ನೂ ಏನೇನು ಹೊರಡುತ್ತದೆಯೋ ಕೇಳಿಯೇ ಬಿಡುತ್ತೇನೆ."

"ಶೀನೂ—ಶೀನೂ—ಹೆಣ್ಣಿಗ ಮುಂಡೇದೇ—ಕೇಳಿದ್ಯಾ—ನಿನ್ನ ರಾಣಿ ಹೇಳಿದ್ದು."

"ಏನಾಯ್ತಮ್ಮ"

ಎಂದು ಶೀನು ಓಡಿ ಬಂದ.

"ನಾನು ಗೂಬೆಯಂತೆ—ಶನಿಯಂತೆ—ಪೀಡೆಯಂತೆ, ಪಿಶಾಚಿಯಂತೆ."

"ಯಾರು ಹಾಗೆ ಅಂದವರು."

"ಅವಳು ನಿನ್ನ ಚಿನ್ನಾಲಿ—ಗೌರಿ."

ಶೀನು ರಕ್ತ ನೆತ್ತಿಗೇರಿತು. ಮೂಲೆಯಲ್ಲಿದ್ದ ತಂದೆಯವರ ಬೆತ್ತ ತೆಗೆದು ಕೊಂಡು ಗೌರಿಗೆ ಮೈ ಬಾಸುಂಡೆ ಬರುವ ಹಾಗೆ ಬಡಿದ. ಗೌರಿ ನೋವನ್ನೂ ತೋರಿಸಿಕೊಳ್ಳದೆ ಹೊಡೆಸಿಕೊಳ್ಳುತ್ತಿದ್ದುದನ್ನು ಕಂಡು ಶೀನು ಮತ್ತಷ್ಟು ರೇಗಿ ಬಡಿದ. ಈ ಹತ್ಯಾಕಾಂಡ ನೋಡಲಾರದೆ ಸುಶೀಲ ಬಂದು ಗೌರಿಯನ್ನು ಬಾಚಿ ತಬ್ಬಿಕೊಂಡಳು. ಕೋಪದ ಅಮಲಿನಲ್ಲಿ ಶೀನು ಅತ್ತಿಗೆಗೂ ನಾಲ್ಕು ಏಟು ಬಾರಿಸಿದ. ಅವನಿಗೆ ತಕ್ಷಣ ತಪ್ಪು ಗೊತ್ತಾಯಿತು. ಬೆತ್ತ ಬಿಸುಟು ಅಲ್ಲಿ ನಿಲ್ಲದೆ ಹೊರಟುಹೋದ.

ಫಣಿಯಮ್ಮ ಬಸುಸುಗುಟ್ಟುತ್ತ ಒಂದು ಮೂಲೆ ಹಿಡಿದು ಕುಳಿತರು

ಗೌರಿಯನ್ನು ಸುಶೀಲ ರೂಮಿಗೆ ಕರೆದುಕೊಂಡುಹೋಗಿ ಮಲಗಿಸಿದಳು. ಮೈಯೆಲ್ಲಾ ಬಾಸುಂಡೆಯಿಂದ ನೀಲಿಗಟ್ಟಿತ್ತು. ಬಚ್ಚಲುಮನೆ ಹಂಡೆ ಯಿಂದ ಒಂದು ತಂಬಿಗೆ ಬಿಸಿನೀರು ತಂದು ಬಟ್ಟೆಯಲ್ಲದ್ದಿ ಶಾಖ ಕೊಟ್ಟಳು. ಗೌರಿ ಕಣ್ಣುಬಿಟ್ಟು ನೋಡಿದಳು. ಸುಶೀಲನಿಗೂ ಏಟು ಬಿದ್ದದ್ದು ನೆನಪಾಗಿ

"ನನಗೋಸ್ಕರ ನೀವು ಏಟು ತಿಂದರಲ್ಲಾ ಅಕ್ಕಾ" ಎಂದಳು.

"ನಿನ್ನ ದಮ್ಮಯ್ಯ ಸುಮ್ಮನಿರು ಗೌರಿ—ಏನೂ ಮಾತನಾಡಬೇಡ."

"ಅಕ್ಕ ನನ್ನದು ಪಾಪಿ ಜನ್ಮ. ನನ್ನಿಂದ ಯಾರಿಗೂ ಸುಖವಿಲ್ಲ."

"ನನಗೆ ಸುಖವಿದೆ ಗೌರಿ. ನೀನಿಲ್ಲದಿದ್ದರೆ ನನ್ನ ಬಾಳು ಬರಡು. ನನಗೆ ನೀನು ತಂಗಿಯೂ ಆಗಿದ್ದೀ—ಮಗಳೂ ಆಗಿದ್ದೀ."

"ಅಕ್ಕ—ನಿಮ್ಮ ಋಣ ಈ ಜನ್ಮದಲ್ಲಿ ತೀರಿಸಲಾರೆ"

ಸುಶೀಲನಿಗೆ ಮಾತು ಹೊರಡಲಿಲ್ಲ. ತಂಗಿಯನ್ನಪ್ಪಿಕೊಂಡು ಕಣ್ಣೀರಿನ ಅಭಿಷೇಕ ಮಾಡಿದಳು.

ಫಣಿಯಮ್ಮ ತನಗಾದ ಪ್ರತಿಭಟನೆಯನ್ನು ಮರೆಯಲಿಲ್ಲ. ಅವಕಾಶ ಸಿಕ್ಕಿದಾಗಲೆಲ್ಲಾ ಗೌರಿಯ ಮೇಲೆ ಒಂದಲ್ಲೊಂದು ಚಾಡಿ ಹೇಳಿ ಅವನ ಮನಸ್ಸು ವಿಷವಾಗುವಂತೆ ಮಾಡಿದರು. ಗೌರಿ ಮುಖ ಕಂಡರೆ ಶ್ರೀನಿವಾಸ ಸಿಡುಗುಟ್ಟುವುದಕ್ಕೆ ತೊಡಗಿದ.

ಶ್ರೀನಿವಾಸನ ಪ್ರಾರ್ಥನೆ ನೆರವೇರುವ ದಿನ ಬಂದಿತು. ಹೊಸಪೇಟೆ ಹೈಸ್ಕೂಲಿನಲ್ಲಿ ಒಂದು ಸ್ಥಳ ಖಾಲಿಯಿದೆಯೆಂದು ಬಂದಿದ್ದ 'ಹಿಂದೂ' ಜಾಹೀ ರಾತು ನೋಡಿ ಅಲ್ಲಿಗೂ ಒಂದು ಅರ್ಜಿ ಕಳಿಸಿದ್ದ. ಕೆಲಸಕ್ಕೆ ತೆಗೆದುಕೊಂಡಿ

ದ್ದೇವೆ. ತಿಂಗಳಿಗೆ ೬೦ ಸಂಬಳ—೧೫ ತುಟ್ಟಿಭತ್ಯ—ಕೂಡಲೆ ಬಂದು ಕೆಲಸಕ್ಕೆ ಹಾಜರಾಗಬೇಕೆಂದು ಹೆಡ್‌ಮಾಸ್ತರಿಂದ ಕಾಗದ ಬಂದಿತ್ತು. ಅದನ್ನು ಕಂಡು ಶ್ರೀನಿವಾಸ ಕುಣಿದಾಡಿದ. ಮಗನ ಅಭ್ಯುದಯ ಕಂಡು ಫಣಿಯಮ್ಮನೂ ಪ್ರಸನ್ನಳಾದಳು.

ಶ್ರೀನಿವಾಸ ಹೊರಡುವ ಏರ್ಪಾಡು ಮಾಡಿದ. ತಾನು ಮೊದಲೇ ಹೋಗಿ ಮನೆ ಗೊತ್ತುಮಾಡಿ ಹೆಂಡತಿಯನ್ನು ಕರಸಿಕೊಳ್ಳುವುದಾಗಿ ತಿಳಿಸಿದ. ಬೆಳಿಗ್ಗೆಯ ಗಾಡಿಗೆ ಅವನು ಹೊರಡುವುದೆಂದು ತೀರ್ಮಾನವಾಯಿತು. ರಾತ್ರಿ ಚಚ್ಚರದಿಂದ ಕೆಲಸ ಮುಗಿಸಿ ಗೌರಿ ಬೇಗ ಕೋಣೆಗೆ ಬಂದಳು. ಅಲ್ಲಿ ಶ್ರೀನಿವಾಸ ಮಲಗಿರಲಿಲ್ಲ. ಫಣಿಯಮ್ಮ ಮಗನನ್ನು ತಮ್ಮ ಹತ್ತಿರ ಮಲಗಿಸಿ ಕೊಂಡಿದ್ದರು. ಗೌರಿ ಯೋಚಿಸುತ್ತ ಕುಳಿತುಬಿಟ್ಟಳು. ಅವಳಿಗೆ ದಿಕ್ಕೇ ತೋಚದಂತಾಯಿತು.

ಬೆಳಿಗ್ಗೆ ಹೊರಡುವ ಗಡಿಬಿಡಿಯಲ್ಲಿ ಶ್ರೀನಿವಾಸ ಹೆಂಡತಿಯನ್ನು ಸರಿ ಯಾಗಿ ಮಾತನಾಡಿಸಲಿಲ್ಲ. ಗಾಡಿ ಹತ್ತುವುದಕ್ಕೆ ಮುಂಚೆ ಎಲ್ಲರಿಗೂ ಹೇಳು ವಂತೆ "ಹೋಗಿ ಬರುತ್ತೇನೆ ಗೌರಿ" ಎಂದು ಹೇಳಿದ. ಗೌರಿ ಮನಸ್ಸಿನಲ್ಲಾ ಗುತ್ತಿದ್ದ ಅಲ್ಲೋಲಕಲ್ಲೋಲವನ್ನು ಕಂಡವಳು ಸುಶೀಲಾ ಒಬ್ಬಳೇ.

ರಾತ್ರಿ ಗಂಡನ ಅಪ್ಪಣೆ ಪಡೆದು ಬಂದು ಸುಶೀಲಾ ಗೌರಿಯ ಪಕ್ಕದಲ್ಲಿ ಮಲಗಿದಳು. ಇಬ್ಬರೂ ಒಂದು ಮಾತನ್ನೂ ಆಡಲಿಲ್ಲ. ಗೌರಿಯನ್ನು ತನ್ನ ತೋಳ ತೆಕ್ಕೆಯಲ್ಲಿ ಸುಶೀಲಾ ಅಡಗಿಸಿಕೊಂಡಳು. ಹೃದಯದ ವೇದನೆಗೆ ಹೃದಯವೇ ಸಮಾಧಾನ ಹೇಳಿತು.

ವೆಂಕಟಾಚಲಯ್ಯ ತಮ್ಮ ಗದ್ದೆಯ ಸ್ವಂತ ಆರಂಭ ಶುರುಮಾಡಿಸಿದ್ದರು. ಅವರು ಹಳ್ಳಿಯಲ್ಲಿಯೇ ನಿಂತು ಆರಂಭದ ಕೆಲಸ ನೋಡಿಕೊಳ್ಳುತ್ತಿದ್ದರು. ಶಾನುಭೋಗರ ಮನೆಯಲ್ಲಿ ಕವಳಧ್ವಂಸವಾಗುತ್ತಿತ್ತು. ತಿಂಗಳಿಗೊಮ್ಮೆ ಊರಿಗೆ ಬಂದು ತಮ್ಮ ಪೆನ್‌ಷನ್ ಹಣ ತೆಗೆದುಕೊಂಡು, ಮನೆಯ ಖರ್ಚಿ ಗಷ್ಟು ಕೊಟ್ಟು ಮತ್ತೆ ಹಳ್ಳಿ ಸೇರುತ್ತಿದ್ದರು. ಮನೆಯ ಸರ್ವ ಯಾಜಮಾ ನ್ಯವೂ ಫಣಿಯಮ್ಮನದೇ ಆಗಿತ್ತು.

ಶ್ರೀನಿವಾಸ ಹೊಸಪೇಟೆಗೆ ತಲುಪಿದ ಮಾರನೇ ದಿನವೇ ತಾಯಿ ಹೆಸ ರಿಗೆ ಕಾಗದ ಬರೆದ. ಅದರಲ್ಲಿ ಹೆಂಡತಿಗೆ ಒಂದು ಚೂರು ಕಾಗದ ಬರೆಯ.

ಲಿಲ್ಲ. 'ಇಂದು ಬರುವುದು—ನಾಳೆ ಬರಬಹುದು' ಎಂದು ನಿರೀಕ್ಷಿಸಿ ನಿರೀಕ್ಷಿಸಿ ಗೌರಿ ಸೋತಳು. ಗಂಡ ಊರಿಗೆ ಹೋದ ಮೇಲೆ ಅವಳು ಕಣ್ಣು ತುಂಬ ನಿದ್ದೆ ಮಾಡಿರಲಿಲ್ಲ. ಒಂದುದಿನ ಪ್ರಕೃತಿ ತನ್ನ ಪ್ರಭಾವ ಬೀರಿತು. ಬೆಳಿಗ್ಗೆ ಗೌರಿ ಎದ್ದು ನೋಡುವ ಹೊತ್ತಿಗೆ ಆರುಗಂಟೆಯಾಗಿ ಹೋಗಿದೆ. ಸ್ನಾನಕ್ಕೆ ನೀರು ಕಾದಿಲ್ಲವೆಂದು ಅತ್ತೆ ಕೋಪಿಸಿಕೊಂಡಾರೆಂದು ಒಲೆಗೆ ನಾಲ್ಕು ಒಣಗಿದ ಸೌದೆ ಹೆಚ್ಚಾಗಿ ತಳ್ಳಿ ಉರಿಮಾಡಿ ಕಾಫಿ ಒಲೆಯನ್ನು ಹಚ್ಚುತ್ತಿದ್ದಳು.

ಫಣಿಯಮ್ಮ ಮುಖ ತೊಳೆದುಕೊಳ್ಳುವುದಕ್ಕೆ ಬಂದವರು ಒಲೆ ನೋಡಿದರು.

"ಮನೆಹಾಳು ರಂಡೇರು" ಎಂದು ಬಯ್ದುಕೊಂಡು ಹೆಚ್ಚು ಸೌದೆಯನ್ನು ಹೊರಗೆಳೆದರು. ಅವರಿಗೆ ತೃಪ್ತಿಯಾಗಲಿಲ್ಲ.

"ಗೌರೀ" ಎಂದು ಕೂಗಿದರು

ಗೌರಿ ಬಂದು

"ಏನತ್ತೆ?" ಎಂದಳು.

"ಯಾರೇ ಒಲೆ ಉರಿಮಾಡಿದ್ದು."

"ನಾನು."

"ಏನಿಷ್ಟು ಸೌದೆ ಒಟ್ಟಿದ್ದೀ—ನಿಮ್ಮಪ್ಪ ಕೊಡುತ್ತಾನೋ ಸೌದೆ ದುಡ್ಡು"

ಗೌರಿ ಮಾತನಾಡಲಿಲ್ಲ.

"ಬೊಗಳೇ ಬ್ರಹ್ಮರಾಕ್ಷಸಿ"

ಎಂದು ಗರ್ಜಿಸಿದರು. ಗೌರಿ ಅದಕ್ಕೂ ಉತ್ತರ ಹೇಳಲಿಲ್ಲ. ಮಾತಾಡಿದರೆ ಅತ್ತೆ ಮತ್ತಷ್ಟು ರೇಗುತ್ತಾರೆಂದು ಅವಳು ಮೌನಳಾಗಿದ್ದಳು. ಫಣಿಯಮ್ಮನ ರಕ್ತ ಬಿಸಿಯಾಗತೊಡಗಿತು.

"ಬೊಗಳುತ್ತೀಯೋ ಇಲ್ಲವೇ"

ಎನ್ನುತ್ತಾ ಕೈಯ್ಯಲ್ಲಿದ್ದ ಕೊಳ್ಳಿಯಿಂದ ಗೌರಿಯ ಮೂತಿ ತಿವಿಯ ಹೋದರು. ಅವಳು ಕತ್ತು ಓರೆಮಾಡಲು ಕೊಳ್ಳಿ ಎಡತೋಳಿಗೆ ತಾಕಿ ಸುಟ್ಟಿತು,

"ಅಯ್ಯೋ"—ಅನ್ನುತ್ತಾ ಚೀರಿ ಗೌರಿ ನಿಂತಲ್ಲಿಯೇ ಬಿದ್ದುಬಿಟ್ಟಳು. ಅವಳ ಆರ್ತನಾದ ನೋಡಿ ನರಸಿಂಹಮೂರ್ತಿ, ಸುಶೀಲ ಓಡಿಬಂದು ಅವಳ

ನ್ನೆತ್ತಿಕೊಂಡು ಹೋಗಿ ಹಾಸಿಗೆಯ ಮೇಲೆ ಮಲಗಿಸಿದರು. ಸುಶೀಲ ಹಣೆಗೆ ನೀರು ತಟ್ಟಿ ಗೌರಿಯನ್ನು ಮೂರ್ಛೆಯಿಂದ ಎಬ್ಬಿಸಿದಳು. ತೋಳಮೇಲೆ ಬಲವಾಗಿ ಉಂಡಿಗೆ ಒತ್ತಿದ ಹಾಗಿತ್ತು. ಸುಶೀಲ ಒಳಗಿನಿಂದ ಸ್ವಲ್ಪ ಜೇನು ತುಪ್ಪ ತಂದು ಹಚ್ಚಿ ಒಂದು ಒದ್ದೆ ಬಟ್ಟೆ ಬಿಗಿದು

"ಡಾಕ್ಟರನ್ನು ಕರೆದುಕೊಂಡು ಬನ್ನೀಂದ್ರೆ"

ಎಂದಳು. ನರಸಿಂಹಮೂರ್ತಿ ಡಾಕ್ಟರನ್ನು ಕರೆತಂದ. ಅವರು ಗಾಯಕ್ಕೆ ಮುಲಾಮು ಹಚ್ಚಿ ಒಂದು ಇಂಜಕ್ಷನ್ ಕೊಟ್ಟು ಹೋದರು. ಸುಶೀಲ ಗಂಡನನ್ನು ನೋಡಿ

"ನಿಮ್ಮ ತಾಯಿ ಪ್ರಭಾವ ನೋಡಿ. ಕಂಡವರ ಮನೆ ಹೆಣ್ಣುಮಕ್ಕಳನ್ನು ಹೀಗೆ ಗೋಳುಹುಯ್ದುಕೊಂಡರೆ ದೇವರ ಒಳ್ಳೆಯದು ಮಾಡುತ್ತಾನೆಯೇ?"

ಎಂದಳು. ನರಸಿಂಹಮೂರ್ತಿ ಹೆಂಡತಿಯ ಮಾತಿಗೆ ಮೂಕಸಮ್ಮತಿ ತೋರಿ ಸುಮ್ಮನಾದ.

ಸುಟ್ಟಗಾಯವಲ್ಲದೆ ಬಿದ್ದ ರಭಸಕ್ಕೆ ಹಣೆಗೂ ಏಟುತಾಗಿತ್ತು. ಗಾಯಗಳು ಮಾಗಬೇಕಾದರೆ ೮-೧೦ ದಿವಸ ಹಿಡಿಯಿತು. ಸುಶೀಲ ಒಂದೇಸಮನೆ ತಂಗಿಯ ಉಪಚಾರಮಾಡಿದಳು. ನೋವಿನ ಬಾಧೆಗೆ ಗೌರಿಗೆ ದಿನವೂ ಬಹಳ ಜ್ವರ ಬರುತ್ತಿತ್ತು. ಜ್ವರದ ತಾಪದಲ್ಲಿ ಅವಳು ಹುಚ್ಚುಹುಚ್ಚಾಗಿ ಮಾತನಾಡುತ್ತಿದ್ದಳು.

ತಾಯಿಯ ವರ್ತನೆ ನರಸಿಂಹಮೂರ್ತಿಗೂ ತುಂಬ ಬೇಸರವನ್ನುಂಟುಮಾಡಿತ್ತು. ಆದರೆ ಆಕೆಗೆ ವಿವೇಕ ಹೇಳುವ ಶಕ್ತಿ ಧಾರ್ಷ್ಟ್ಯ ಅವನಲ್ಲಿಯೂ ಇರಲಿಲ್ಲ.

ಘಣಿಯಮ್ಮ ಸೊಸೆಯ ಬಳಿ ಸುಳಿಯಲಿಲ್ಲ. ಊಟ ಮುಗಿದ ಕೂಡಲೆ ಪಕ್ಕದ ಮನೆ ಸೇರಿಬಿಡುತ್ತಿದ್ದರು. ಸುಶೀಲನನ್ನೂ ಮಾತನಾಡಿಸುತ್ತಿರಲಿಲ್ಲ.

ಗೌರಿಗೆ ಔಷಧಿ ಕುಡಿಸುತ್ತಾ ಸುಶೀಲ ಕೇಳಿದಳು

"ಗೌರಾ ನಿಮ್ಮ ತಾಯೀನ ಬರಹೇಳಲೇನಮ್ಮಾ"

"ಏಕೆ ಅಕ್ಕ?"

"ಅವರು ನಿನ್ನ ಹತ್ತಿರವಿದ್ದರೆ ಸ್ವಲ್ಪ ಸಮಾಧಾನವಾಗಬಹುದು. ರಾತ್ರಿ ನೀನು ಕನವರಿಸಿಕೊಳ್ಳುವುದನ್ನು ನೋಡಿದರೆ ನನಗೆ ಹೆದರಿಕೆಯಾಗುತ್ತದೆ."

"ಶಾಯೀನ ಕರೆಸಬೇಡಿ ಅಕ್ಕಾ. ನನ್ನ ಸ್ಥಿತಿ ನೋಡಿ ನೀವೊಬ್ಬರು ಕೊರಗುತ್ತಿರುವುದು ಸಾಲದೇ? ಮಗಳು ಅತ್ತೆಯ ಮನೆಯಲ್ಲಿ ಸುಖವಾಗಿ ದ್ದಾಳೆ ಅಂದುಕೊಂಡಿದ್ದಾರೆ. ನಾನೇಕೆ ಸುಮ್ಮನೆ ಅವರ ದುಃಖ ಹೆಚ್ಚಿಸ ಬೇಕು."

"ನೀನು ಹೆದರ ಬೇಡ ಗೌರ. ಅತ್ತೆ ಬೇಡವೆಂದರೆ ನಾನು ವಿಚಾರಿಸಿ ಕೊಳ್ಳುತ್ತೇನೆ. ನೀನು ಹೇಳಿದರೆ ನಾನೇ ಹೋಗಿ ನಿಮ್ಮ ಶಾಯೀನ ಕರೆದು ಕೊಂಡು ಬರುತ್ತೇನೆ."

"ನೀವು ನನ್ನ ಹತ್ತಿರವಿದ್ದರೆ ಸಾಕು ಅಕ್ಕ. ನನಗೆ ಯಾರೂ ಬೇಡ."

"ನಿನ್ನಿಷ್ಟ."

"ಅಕ್ಕಾ— ಅವರು ಅತ್ತೆಮ್ಮನವರಿಗೆ ಕಾಗದ ಬರೆದಿದ್ದರೇ."

"ದಿನಾ ಕಾಗದ ಬರುತ್ತಾ ಇದೆ. ಅತ್ತೆ ಎಲ್ಲೋ ಹೋಗಿ ಅದಕ್ಕೆ ಉತ್ತರ ಬರಸಿ ಹಾಕುತ್ತಾರೆ."

"ಚೆನ್ನಾಗಿದ್ದಾರಂತೆಯೇ?"

"ಇದ್ದಾರಂತೆ."

"ಊಟಕ್ಕೆ ಏನು ಮಾಡ್ತಾ ಇದ್ದಾರೆ."

"ಉಡುಪಿ ಬ್ರಾಹ್ಮಣನ ಹೋಟಲಿದೆಯಂತೆ. ಅಲ್ಲಿ ಊಟ ಮಾಡ್ತಾ ಇದ್ದಾರಂತೆ."

"ಮನೆ ಸಿಕ್ಕಿತಂತೇ?"

"ಹುಡುಕುತ್ತಾ ಇದ್ದಾರಂತೆ."

"ಮನೆ ಸಿಕ್ಕಿದರೆ ನನ್ನ ಕರೆಸಿಕೊಳ್ಳುತ್ತಾರೆಯೇ ಅಕ್ಕಾ."

"ಕರಸಿಕೊಳ್ಳದೆ ಏನು ಮಾಡುತ್ತಾರೆ ಹೇಳು."

"ಅತ್ತೆ ಅದಕ್ಕೂ ಅಡ್ಡಿ ಬಂದರೋ?"

"ಅವರಿಗೆಷ್ಟು ಧೈರ್ಯ."

"ಅಕ್ಕಾ–ನಿಜವಾಗಿಯೂ ನನಗೆ ಅತ್ತೆ ಕಂಡರೆ ತುಂಬ ಭಯವಾಗುತ್ತೆ."

"ಆಗದೇ ಇರತ್ತೆಯೇ? ಅವರ ಕೈಯಲ್ಲಿ ನೀನು ಕಮ್ಮಿ ಅನುಭವಿ ಸಿದ್ದೀಯಾ."

"ಅಂಥದು ಇನ್ನೂ ನೂರು ಸಲ ಅನುಭವಿಸಬಲ್ಲೆ ಅಕ್ಕಾ. ಆದಕ್ಕಾಗಿ ನಾನು ಯೋಚನೆ ಮಾಡಲ್ಲ. ನನಗೂ—ಅವರಿಗೂ ಎಲ್ಲಿ ತಂದುಹಾಕಿ ಬಿಡುತ್ತಾರೋ ಎಂದು ಭಯ."

"ಮಕ್ಕಳು ಎಲ್ಲಾದಕ್ಕೂ ತಾಯಿ ಮಾತು ಕೇಳುತ್ತಾರೇನೇ ಗೌರಾ. ಕೇಳುವುದಕ್ಕೆ ಕೇಳುತ್ತಾರೆ—ಕೇಳಬಾರದುದಕ್ಕೆ 'ಊಹೂ' ಅನ್ನುತ್ತಾರೆ."

"ನಿಮ್ಮ ಬಾಯಿ ಹರಕೆ ನಿಜವಾಗಲಿ ಅಕ್ಕಾ."

"ಗೌರಾ—ನೀನು ಯಾವುದೂ ಯೋಚನೆ ಮಾಡಬೇಡ. ಈಗ ನಿನಗೆ ಶನಿ ಕ್ರೂರವಾಗಿದ್ದಾನೇಂತ ಕಾಣತ್ತೆ. ಮುಂದಕ್ಕೆ ಎಲ್ಲಾ ಸರಿಹೋಗತ್ತೆ."

"ಅಕ್ಕಾ—ನಾನು ಹೊಸಪೇಟೆಗೆ ಹೋಗಿ ಸಂಸಾರ ಮಾಡಿಕೊಂಡಿರುವಾಗ ನೀವು ಬರುತ್ತೀರಾ?"

"ಆಗ ನೀನು ನನ್ನ ಜ್ಞಾಪಕವಿಟ್ಟುಕೊಂಡಿರುತ್ತೀಯಾ?"

"ಹುಡುಗಾಟಿಕೆ ಮಾಡಬೇಡಿ. ನಿಜವಾಗಿಯೂ ನಾಲ್ಕು ದಿವಸವಾದರೂ ಬರುತ್ತೀರಾ ಅಕ್ಕಾ."

"ನಾಲ್ಕು ದಿವಸ ಸಾಕೇನು. ನಾನು ನಾಲ್ಕು ತಿಂಗಳಿದ್ದು ನಿನ್ನ ಬಾಣಂತನಮಾಡಿ ಹಿಂದಿರುಗುತ್ತೀನೆ."

"ಅಯ್ಯೋ ನನ್ನಮ್ಮಾ—ಏನು ಕರುಳೇ ನಿಮ್ಮದು."

ಎಂದು ಗೌರಿ ಸುಶೀಲನ ಕೈ ತೆಗೆದುಕೊಂಡು ಕಣ್ಣಿಗೊತ್ತಿಕೊಂಡಳು.

## ೧೬

ಹೊಸಪೇಟೆಯಲ್ಲಿ ಮೊದಲೇ ಒಂದು ಹೈಸ್ಕೂಲ್ ಇತ್ತು. ಆದರೆ ವಿದ್ಯಾರ್ಥಿಗಳ ಸಂಖ್ಯೆ ವಿಶೇಷ ಬೆಳೆಯಲು ಊರಿನ ಪ್ರಮುಖರು ಸೇರಿ ಇನ್ನೊಂದು ಹೈಸ್ಕೂಲು ಸ್ಥಾಪಿಸಲು ನಿರ್ಧರಿಸಿದರು. ಡಿಸ್ಟ್ರಿಕ್ಟ್ ಬೋರ್ಡಿನವರು ಸ್ವಲ್ಪ ಗ್ರ್ಯಾಂಟ್ ಕೊಡುವುದಕ್ಕೂ ಒಪ್ಪಿಕೊಂಡರು. ಅದೇ ಊರಿನ ರಾಜಾರಾಯರು ಬಳ್ಳಾರಿ ಹೈಸ್ಕೂಲಿನ ಹೆಡ್‌ಮಾಸ್ಟರ್ ಆಗಿದ್ದು ನಿವೃತ್ತರಾಗಿದ್ದರು. ನ್ಯೂ ಹೈಸ್ಕೂಲಿನ ಅಧಿಕಾರ ವರ್ಗದವರು ಅವರನ್ನೇ ಹೆಡ್‌ಮಾಸ್ಟರಾಗಿ ತೆಗೆದುಕೊಂಡಿದ್ದರು.

ಹೈಸ್ಕೂಲಿನ ಒಬ್ಬ ಉಪಧ್ಯಾಯರು ಬಿ.ಟಿ. ಟ್ರೇನಿಂಗ್ ಸಲುವಾಗಿ ಹೋದುದರಿಂದ ಅವರ ಸ್ಥಾನ ಖಾಲಿಬಿತ್ತು. ಹೆಡ್ ಮಾಸ್ಟರು ಹಿಂದೂ, ಎಕ್ಸ್ ಪ್ರೆಸ್ ಪತ್ರಿಕೆಗಳಲ್ಲಿ ಉಪಾಧ್ಯಾಯರಿಗಾಗಿ ಜಾಹೀರಾತು ಕೊಟ್ಟರು. ಅಂತಹ ಜಾಹಿರಾತನ್ನೇ ನೋಡಿ ಶ್ರೀನಿವಾಸ ತನ್ನ ಅರ್ಜಿ ಸಲ್ಲಿಸಿದ್ದ.

ರಾಜಾರಾಯರು ಹೊಸಪೇಟೆಯವರೇ. ಎಲ್ಲ ಕಡೆಯಿಂದ ಅರ್ಜಿಗಳು ಬಂದಿದ್ದರೂ ಅವರು ಮೈಸೂರಿನವರನ್ನು ಆರಿಸುವುದಕ್ಕೆ ಒಂದು ಕಾರಣವಿತ್ತು. ರಾಜಾರಾಯರು ತಮ್ಮ ಮಗಳನ್ನು ಮೈಸೂರಿಗೆ ಲಗ್ನಮಾಡಿಕೊಟ್ಟಿದ್ದರು. ಮೈಸೂರಿಗೆ ಹೋಗಿಬಂದು ಮೈಸೂರಿನ ಮೇಲೆ ಹೆಚ್ಚಿನ ಗೌರವ ಅಭಿಮಾನ ಬೆಳೆದಿತ್ತು. ಅವರ ದ್ಯೋತಕವಾಗಿ ತಮ್ಮ ಶಾಲೆಯಲ್ಲಿ ಒಬ್ಬ ಮೈಸೂರಿನವನಿಗೆ ಸ್ಥಳ ಕೊಡುವುದೆಂದು ಅವರು ನಿರ್ಧರಿಸಿದ್ದರು.

ಶ್ರೀನಿವಾಸನಿಗೆ ಹೊಸಪೇಟೆಯಲ್ಲಿ ಯಾರೂ ಗುರುತಿನವರಿರಲಿಲ್ಲ. ಶಾಲೆಯ ಒಬ್ಬ ದವಾಲಿ ಆಳು ಸ್ಟೇಷನ್ನಿಗೆ ಬಂದು ಅವನನ್ನು ಹೆಡ್ ಮಾಸ್ಟರ ಮನೆಗೆ ಕರೆದೊಯ್ದ. ಶ್ರೀನಿವಾಸನಿಗೆ ರೂಮು, ಹೊಟೆಲ್ ವ್ಯವಸ್ಥೆಯಾಗುವವರೆಗೆ ಅವನು ಅವರಲ್ಲಿಯೇ ಇರುವುದೆಂದು ನಿಷ್ಕರ್ಷಿಸಲಾಯಿತು.

''ನನ್ನ ಅಳಿಯಂದಿರ ಪರಿಚಯ ನಿಮಗಿದೆಯೇ ಶ್ರೀನಿವಾಸರಾವ್ ?''

''ಅವರ ಹೆಸರೇನು ಸಾರ್, ಎಲ್ಲಿದ್ದಾರೆ ?''

''ಮೈಸೂರಿನಲ್ಲಿ ಕೃಷ್ಣರಾಜೇಂದ್ರ ಮಿಲ್ಸ್ ಕಛೇರಿಯಲ್ಲಿ ಅಕೌಂಟೆಂಟ್ ಆಗಿದ್ದಾರೆ. ಶಾಮಣ್ಣ ಎಂದು ಹೆಸರು. ಮನೆ ಚಾಮುಂಡಿ ಮೊಹಲ್ಲಾದಲ್ಲಿ."

"ನನಗೆ ಗುರುತಿಲ್ಲ ಸಾರ್. ಬೆಂಗಳೂರು ಬಿಟ್ಟು ನಾನು ಹೊರಗೆ ಹೋಗಿಲ್ಲ.''

''ನೀವು ಅಲ್ಲಿಗೆ ಹೋದಾಗ ಅವರ ಪರಿಚಯ ಮಾಡಿಕೊಳ್ಳಿ. ಬಹಳ ಒಳ್ಳೆಯ ಮನುಷ್ಯ.''

"ಅವಶ್ಯಕವಾಗಿ. ಸಾರ್.... ನನ್ನ ಬದಲಿ ಇನ್ನು ಒಂದು ವರ್ಷಕ್ಕೆ ಮುಗಿದು ಹೋಗುತ್ತದಲ್ಲಾ.''

''ಯೋಚನೆಯೇಕೆ ಬಿ.ಟಿ. ಗೆ ಹೋಗಿರುವ ಮೇಸ್ಟ್ರರು ಬಂದರೆ ಬರಲಿ. ನಾವು ಮುಂದಿನವರ್ಷ ಇನ್ನಿಬ್ಬರು ಉಪಾಧ್ಯಾಯರನ್ನು ಹೆಚ್ಚಾಗಿ ತೆಗೆದು

ಕೊಳ್ಳುತ್ತೇವೆ. ನಿಮ್ಮ ಕೆಲಸ ಖಾಯಂ ಮಾಡಿಸಿಕೊಡುತ್ತೇನೆ. ಸುಮ್ಮನಿರಿ ಹೆದರಬೇಡಿ.''

''ತುಂಬಾ ಥ್ಯಾಂಕ್ಸ್ ಸಾರ್. ನೀವು ನನಗೆ ಹೇಳಲಾರದಷ್ಟು ಉಪ ಕಾರ ಮಾಡಿರುವಿರಿ.''

''ಉಪಕಾರವೇನು ಶ್ರೀನಿವಾಸರಾವ್ ಕೆಲಸ ಖಾಲಿಯಿತ್ತು. ಅದಕ್ಕೆ ಯಾರನ್ನಾದರೂ ತೆಗೆದುಕೊಳ್ಳಲೇಬೇಕಾಗಿತ್ತು. ನೀವು ದಕ್ಷತೆಯಿಂದ ಕೆಲಸ ಮಾಡಿ ಒಳ್ಳೆಯ ಹೆಸರು ಸಂಪಾದಿಸಿಕೊಳ್ಳಿ.''

''ಆಗಲಿ ಸಾರ್.''

''ಇನ್ನೊಂದು ವಿಷಯ. ಊರಿನ ರಾಜಕಾರಣದಲ್ಲಿ ಮಾತ್ರ ಕೈಹಾಕ ಬೇಡಿ. ಓಟನ್ನು ದೊರಕಿಸಿಕೊಡಿ ಎಂದು ಜನ ಬಂದು ಕಾಡುತ್ತಾರೆ. ಊರಿನ ರಾಜಕಾರಣದಲ್ಲಿ ಕೈಹಾಕಿದರೆ ನಿಮ್ಮ ಭವಿಷ್ಯ ಹಾಳಾಗಿಹೋಗತ್ತೆ.''

''ನನಗೆ ಯಾರೂ ಗುರುತೇ ಇಲ್ಲವಲ್ಲ ಸಾರ್.''

''ಗುರುತಾಗುವುದು ಎಷ್ಟು ಹೊತ್ತು.''

''ನನಗೆ ಅದರಲ್ಲೆಲ್ಲಾ ಆಸಕ್ತಿಯೂ ಇಲ್ಲ.''

''ಒಳ್ಳೆಯದು. ನಾನು ಒಂದೆರಡು ಪ್ರೈವೇಟ್ ಟ್ಯೂಷನ್ ಗೊತ್ತು ಮಾಡಿಕೊಡುತ್ತೇನೆ. ಅದರಿಂದಲೂ ೩೦—೪೦ ಸಿಕ್ಕಬಹುದು.''

''ತಮ್ಮ ಆಶೀರ್ವಾದ ಸಾರ್ ''

ರಾಜಾರಾಯರೇ ಜನ ಬಿಟ್ಟು ಶ್ರೀನಿವಾಸನಿಗೆ ಒಂದು ಸಣ್ಣ ಮನೆ ಹುಡುಕಿಸಿದರು. ಸಮೀಪದಲ್ಲಿಯೇ ಉಡುಪಿ ಊಟದ ಹೋಟೆಲ್ ಇದ್ದದ್ದು ಅವನಿಗೆ ಅನುಕೂಲವಾಯಿತು. ಶಾಲೆಗೆ ಮನೆ ಹತ್ತು ನಿಮಿಷದ ದಾರಿ. ಮನೆ ಸಿಕ್ಕಿದ ಕೂಡಲೇ ಶ್ರೀನಿವಾಸ ಅಲ್ಲಿಗೆ ಬದಲಾಯಿಸಿಕೊಂಡು ತಾಯಿಗೆ ಕಾಗದ ಬರೆದ.

ತಾಯಿಯಿಂದ ಅವನಿಗೆ ಪ್ರತಿದಿನವೂ ಕಾಗದಗಳು ಬರುತ್ತಿದ್ದುವು. ಅದರ ತುಂಬ ಗೌರಿಯ ಸುದ್ದಿಯೇ. ಗೌರಿ ಹಾಗೆ ಮಾಡಿದಳು—ಹೀಗೆ ಮಾಡಿದಳು. ಇವತ್ತು ಅಕ್ಕಿ ಮಾರಿಕೊಂಡಳು—ಬೇಳೆ ಮಾರಿಕೊಂಡಳು. ಒಕ್ಕಲಗಿತ್ತಿ ಅವಳೂ ಷಾಮೀಲಾಗಿ ಮನೆ ದವಸ ಧಾನ್ಯವನ್ನೆಲ್ಲಾ ಮಾರಿ

ಕೊಳ್ಳುತ್ತಾರೆ. ಆದಕ್ಕಾಗಿ ಗೌರಿ ಬೇಕೆಂದು ರಾತ್ರಿ ಅರ್ಧಸೇರು ಅಕ್ಕಿ ಹೆಚ್ಚು ಹಾಕಿ ಬೆಳಗಾಗ ಒಕ್ಕಲಗಿತ್ತಿಗೆ ಒಂದು ತಪ್ಪಲೆ ಅನ್ನ ಕೊಡುತ್ತಾಳೆ.

ಗೌರಿ ಮಾಡುತ್ತಿದ್ದ ಅನ್ಯಾಯಗಳನ್ನೆಲ್ಲಾ ಕೇಳಿಕೇಳಿ ಶ್ರೀನಿವಾಸನ ಮನಸ್ಸು ಕೆಟ್ಟುಹೋಯಿತು. ಎಲ್ಲಿ ಈ ಪ್ರಾರಬ್ಧ ನನಗೆ ಗಂಟುಬಿತ್ತು, ಎಂದು ತನಗೆ ಲಗ್ನವಾದ ದಿನವನ್ನು ಶಪಿಸಿದ.

ತಾಯಿಯನ್ನು ಗೌರಿ ವಿರೋಧಿಸಿ ಮಾತನಾಡಿದ್ದು, ಆ ದಿನ ತಾನೇ ಕೋಪಿಸಿಕೊಂಡು ಗೌರಿಯನ್ನು ಚೆನ್ನಾಗಿ ಥಳಿಸಿದ್ದು ಜ್ಞಾಪಕಕ್ಕೆ ಬಂತು. ನಾನು ಇದ್ದಾಗಲೇ ತಾಯಿಗೆ ವಿರೋಧವಾಗಿ ನಿಲ್ಲುತ್ತಿದ್ದ ಗೌರಿ ಈಗ ತಾಯಿಯನ್ನು ತುಂಬ ಕಾಡುತ್ತಿರಬಹುದು ಎಂದು ತರ್ಕಮಾಡಿದ. ಅವನ ತರ್ಕಕ್ಕೆ ಸೊಪ್ಪು ಹಾಕುವಂತೆ ಫಣಿಯಮ್ಮ "ಗೌರಿ ನನ್ನ ಗೋಳು ಹುಯ್ದುಕೊಳ್ಳುತ್ತಿದ್ದಾಳೆ. ಮಗೂ—ನನ್ನ ಬೇಗ ಕರೆಸಿಕೊಂಡುಬಿಡು. ನಿನ್ನ ಮುಖ ನೋಡಿಕೊಂಡು ಪ್ರಾಣ ಬಿಡುತ್ತೇನೆ" ಎಂದು ಬರೆದಿದ್ದಳು. ತಾಯಿಯ ಸ್ಥಿತಿಯನ್ನು ಊಹಿಸಿಕೊಂಡು ಶ್ರೀನಿವಾಸ ಮಮ್ಮಲ ಮರುಗಿದ.

ಕೂಡಲೆ ತಾಯಿಯನ್ನು ಕರೆಸಿಕೊಳ್ಳುವುದು ಸಾಧ್ಯವಾಗಲಿಲ್ಲ. ಮನೆಗೆ ಪಾತ್ರೆ ಪದಾರ್ಥ, ದಿನಸಿ ಸಾಮಾನುಗಳನ್ನೊದಗಿಸಬೇಕಾಯಿತು. ಕೈಗೆ ೨–೩ ತಿಂಗಳ ಸಂಬಳ ಬಂದ ಮೇಲೆ ಬೇಕಾದ ಪದಾರ್ಥಗಳನ್ನು ಕೊಂಡು ಅನಂತರ ತಾಯಿಯನ್ನು ಕರೆಸಿಕೊಳ್ಳಬೇಕೆಂದು ನಿರ್ಧರಿಸಿದ.

ರಾಜಾರಾಯರು ಆಗಾಗ್ಗೆ ಶ್ರೀನಿವಾಸನನ್ನು ತಮ್ಮ ಮನೆಗೇ ಊಟಕ್ಕೆ ಕರೆದುಕೊಂಡು ಹೋಗುತ್ತಿದ್ದರು. ಶಾಲೆಯಲ್ಲಿ ಅವನು ಕೆಲಸ ಮಾಡುತ್ತಿದ್ದ ರೀತಿಯನ್ನು ಕಂಡು ರಾಜಾರಾಯರು ಅವನನ್ನು ಪ್ರೀತಿಸುತ್ತಿದ್ದರು. ಒಂದು ದಿನ ಅವರು ಕೇಳಿದರು.

"ಶ್ರೀನಿವಾಸರಾವ್, ನಿಮ್ಮ ತಂದೆ ಏನಾಗಿದ್ದರು ?"

"ಅವರೂ ಒಂದು ಹೈಸ್ಕೂಲಿನ ಹೆಡ್‌ಕ್ಲಾರ್ಕ್ ಆಗಿದ್ದರು ಸಾರ್. ಈಗ ರಿಟೈರಾಗಿದ್ದಾರೆ. ಹಳ್ಳಿಯಲ್ಲಿರುತ್ತಾರೆ."

"ಹೈಸ್ಕೂಲ್ ಸೇವೆ ನಿಮ್ಮ ಮನೆತನಕ್ಕೇ ಬಂದುಬಿಟ್ಟಿದೆ."

"ಹೌದು ಸಾರ್."

"ನಿಮಗೆ ಮದುವೆ ಆಗಿದೆಯೋ ?"

" ಇಲ್ಲ ಸಾರ್."

" ಅದೇಕೆ ಇಷ್ಟು ದಿನ ಮದುವೆ ಮಾಡಿಕೊಳ್ಳುವುದಕ್ಕೆ ತಡೆದರು ?"

" ನನಗೆ ಪ್ಯಾಸಾಗಲಿ ಎಂದು ಕಾದಿದ್ದರು. ಪ್ಯಾಸಾಗುತ್ತಲು ನಾನು ಇಲ್ಲಿಗೆ ಬಂದುಬಿಟ್ಟೆ. ಈಸಲ ರಜಕ್ಕೆ ಊರಿಗೆ ಹೋದಾಗ ಮದುವೆಮಾಡುವ ಯೋಚನೆ ಇಟ್ಟುಕೊಂಡಿದ್ದಾರೆ."

ರಾಜಾರಾಯರಿಗೆ ತಾನು ಸುಳ್ಳೇಕೆ ಹೇಳಿದೆನೆಂಬುದು ಶ್ರೀನಿವಾಸನಿಗೆ ಗೊತ್ತಾಗಲಿಲ್ಲ. ಅವರಿಗೆ ಸುಳ್ಳು ಹೇಳಿ ತಾನೇನೂ ಸಾಧಿಸಬೇಕಾಗಿರಲಿಲ್ಲ. ಆದರೂ ಸುಳ್ಳು ಸಹಜವಾಗಿ, ನಿರಾತಂಕವಾಗಿ ಬಾಯಿಂದ ಬಂದುಬಿಟ್ಟಿತು.

ಕೆಲವು ದಿವಸ ಕಳೆದವು. ಒಂದು ಸಂಜೆ ತನ್ನ ಕೆಲಸ ಮುಗಿಸಿಕೊಂಡು ಶ್ರೀನಿವಾಸ ಆಫೀಸ್‌ರೂಮಿಗೆ ಡಸ್ಟರ್, ಚಾಕ್‌ಪೀಸ್ ಹಾಕಿಬರಲು ಹೋದ. ರಾಜಾರಾಯರು ಅವನನ್ನು ನೋಡಿ

" ಮನೆಗೆ ಹೊರಟಿರಾ ಶ್ರೀನಿವಾಸರಾವ್."

" ಹೌದು ಸಾರ್. ಏನಾದರೂ ಕೆಲಸವಿತ್ತೇ ?"

" ಕೆಲಸವೇನೂ ಇಲ್ಲ. ನಿಮಗೆ ಪುರಸತ್ತಿದ್ದರೆ ಚಿತ್ರವಾಡಿಗೆ ಕಡೆಗೆ ವಾಕಿಂಗ್ ಹೋಗಿಬರೋಣ ?"

" ಆಗಬಹುದು ಸಾರ್."

ರಾಜಾರಾಯರು ತಮ್ಮ ಕೆಲಸ ಬೇಗ ಮುಗಿಸಿಕೊಂಡು ಶ್ರೀನಿವಾಸನ ಜತೆ ಹೊರಟರು. ಅಲ್ಲಿ ಇಲ್ಲಿ ಸುತ್ತಾಡಿಕೊಂಡು

" ಬನ್ನಿ, ನನ್ನ ಸ್ನೇಹಿತರೊಬ್ಬರಿದ್ದಾರೆ ಇಲ್ಲಿ. ಅವರನ್ನು ಮಾತನಾಡಿಸಿ ಕೊಂಡು ಬರೋಣ."

ಎಂದು ಚಿತ್ರವಾಡಿಗಿಯಲ್ಲಿ ಒಂದು ವಿಶಾಲ ಭವನಕ್ಕೆ ಕರೆದೊಯ್ದರು. ರಾಜಾರಾಯರನ್ನು ಕಂಡೊಡನೆಯೇ ಅವರ ಸ್ನೇಹಿತರು ಗೋಪಾಲಯ್ಯ ಆದರ ದಿಂದ ಬರಮಾಡಿಕೊಂಡರು. ರಾಜಾರಾಯರು ಉಭಯ ಪರಿಚಯ ಮಾಡಿ ಕೊಟ್ಟರು.

ಗೋಪಾಲಯ್ಯನವರು ಶ್ರೀಮಂತರೆಂದು ರಾಜಾರಾಯರು ಹೇಳಬೇಕಾದ ಕಾರಣವೇ ಇರಲಿಲ್ಲ. ಮನೆಯಲ್ಲೆಲ್ಲಾ ಧನಲಕ್ಷ್ಮಿ ನರ್ತನವಾಡುತ್ತಿದ್ದಳು. ಹಳೆಯ ಕಾಲದ ವೈಭವದ ಮನೆ. ವಿಶಾಲವಾದ ಕಂಬದ ತೊಟ್ಟಿ. ಬೇಕಾ

ದಷ್ಟು 'ಗುಳೋವು' ಗಳನ್ನು ತೂಗುಹಾಕಿದ್ದರು. ಗೋಡೆಗಳ ಮೇಲೆ ಕೈಯಲ್ಲಿ ಬರೆದ ಹಳೆಯ ಕಾಲದ ದೇವರ ಚಿತ್ರಗಳು. ಗೋಪಾಲಯ್ಯ ನವರಲ್ಲಿ ಶ್ರೀಮಂತಿಕೆಯೊಂದಿಗೆ ವಿನಯ ಸೌಶೀಲ್ಯಗಳು ತುಂಬಿ ತುಳುಕು ತ್ತಿದ್ದುವು.

"ನೋಡಿ ಶ್ರೀನಿವಾಸಯ್ಯ, ನಮ್ಮ ಗೋಪಾಲಯ್ಯ ಶುಗರ್ ಕಂಪನಿ ಡೈರೆಕ್ಟರು, ಅರ್ಬನ್ ಬ್ಯಾಂಕು ಅಧ್ಯಕ್ಷ, ಕೌನ್ಸಿಲ್ ಮೆಂಬರು ಆದರೂ ಅವ ನಲ್ಲಿ ಅಹಂಕಾರ ಎಳ್ಳಷ್ಟೂ ಇಲ್ಲ."

"ತಮ್ಮನ್ನು ಕಂಡು ಬಹಳ ಸಂತೋಷವಾಯಿತು ಸ್ವಾಮಿ."

"ಬರುತ್ತೇನೆಂತ ಹೇಳಿ ಕಳಿಸಬಾರದಾಗಿತ್ತೇನೋ ರಾಜೂ" ಎಂದರು ಗೋಪಾಲಯ್ಯ.

"ನಿನ್ನ ಮನೆಗೆ ನಾನು ಬರುವುದಕ್ಕೆ ಬಾಜಾಬಜಂತ್ರಿ ಬೇಕೇನಯ್ಯ?"

"ಇಲ್ಲ ಸರಿ. ಇದೂ ನಿನ್ನ ಮನೆಯೇ. ಆದರೆ ಅತಿಥಿಗಳನ್ನು ಕರ್ಕೊಂಡು ಬರೋವಾಗ ನಮಗೆ ತಿಳಿಸಿದ್ದರೆ ಏನಾದರೂ ಮಾಡಿಸಬಹುದಾಗಿತ್ತು."

"ಮಾಡಿದ್ದೇ ತರಸು. ಹೆಚ್ಚು ಏನೂ ಬೇಡ."

"ನಾರಾಯಣಾ" ಎಂದು ಗೋಪಾಲಯ್ಯ ಕೂಗಿ "ಕಾಫಿ ತೊಗೊಂಡು ಬಾರೊ" ಎಂದು ಹೇಳಿದರು. ನಾರಾಯಣ ಬರೀಕಾಫಿ ತಂದು ಮುಂದಿಡಲಿಲ್ಲ. ಅದರ ಜತೆ ಉಪ್ಪಿಟ್ಟು, ಸಜ್ಜಿಗೆ, ಫೇಡ, ಬಾಳೆಯಹಣ್ಣು, ಮೋಸಂಬಿ, ಕಿತ್ತಲೆ ಹಣ್ಣು ಇದ್ದುವು. ಫೇಡಕ್ಕೆ ಕೈಹಾಕುತ್ತಾ ರಾಜಾರಾಯರು

"ನಿನಗೆ ನಾನು ಯಾಕೆ ತಿಳಿಸಲ್ಲ ಗೊತ್ತೋ—ಇದಕ್ಕೇ—ತಿಳಿಸದೇ ಬಂದರೇ ಇಷ್ಟು ತುಂಬುತ್ತೀ—ಇನ್ನು ತಿಳಿಸಿಬಂದರೆ ದೇವರೇಗತಿ."

ಫಲಹಾರ ಮುಗಿದ ಮೇಲೆ ಗೋಪಾಲಯ್ಯ

"ರಾತ್ರಿ ಇಲ್ಲೇ ಊಟಕ್ಕಿದ್ದುಬಿಡಿ."

"ನನಗೆ ಸಾಧ್ಯವಿಲ್ಲ ಮಾರಾಯ" ಎಂದರು ರಾಜಾರಾಯರು.

"ನನ್ನ ಮಾತು ಕೇಳು ರಾಜೂ. ಈಗ ಸುತ್ತಾಡಿಕೊಂಡು ಮನೆಗೆ ಬರೋಣ, ಎಂಟುಗಂಟೆಗೆ ಊಟಮಾಡೋಣ, ತಾಂಬೂಲಹಾಕಿಕೊಂಡು ನೀನೂ ಶ್ರೀನಿವಾಸರಾಯರೂ ಮನೆಗೆ ಹೋಗುವಿರಂತೆ."

"ಮನೆಯಲ್ಲಿ ಹೇಳಿ ಬಂದಿಲ್ಲವಲ್ಲಯ್ಯಾ."

" ನಾನು ಹೇಳಿಕಳುಹಿಸುತ್ತೇನೆ."

" ನಿನ್ನ ಇಷ್ಟಾಪ್ಪ. ನಿನ್ನ ಕೈಗೆ ಸಿಕ್ಕೊಂಡ ಮೇಲೆ ನಮ್ಮ ಮಾತು ಎಲ್ಲಿ ನಡೆಯುತ್ತೆ."

ಗೋಪಾಲಯ್ಯ ಕೋಟು ಪೇಟ ಹಾಕಿಕೊಂಡು ಬಂದರು. ತಮ್ಮ ಜಮೀನು, ತೋಟ ಎಲ್ಲಾ ತಿರುಗಾಡಿಸಿಕೊಂಡು ಬಂದರು. ತಾನೇ ತಾನಾಗಿ ಗೋಪಾಲಯ್ಯನವರ ಕಬ್ಬಿನ ತೋಟದಲ್ಲಿ ಬೆಳೆದು ನಿಂತಿದ್ದ ಕಬ್ಬಿನ ಫಸಲನ್ನು ನೋಡಿ ಶ್ರೀನಿವಾಸ ಬೆರಗಾದ.

" ಈ ಸಲ ಫಸಲು ಎಷ್ಟಕ್ಕೆ ಕೊಟ್ಟೆ ಗೋಪಾಲ."

" ೩೦,೦೦೦ ಕ್ಕೆ ಹೋಯಿತಪ್ಪಾ. ಈ ಸಲ ಫಸಲು ಅಷ್ಟು ಚೆನ್ನಾಗಿ ಆಗಲಿಲ್ಲ."

" ದುಡ್ಡು ಸೇರುತ್ತಾ ಸೇರುತ್ತಾ ನಿನ್ನ ಸಂಕಟ ಹೆಚ್ಚುತ್ತೆ."

" ದುಡ್ಡು ಸೇರಿಸದಿದ್ದರೆ ನಿನ್ನಕಾಟ ತಪ್ಪಿಸಿಕೊಳ್ಳುವುದು ಹೇಗಪ್ಪಾ."

" ನೋಡಿ ಶ್ರೀನಿವಾಸರಾವ್. ನಮ್ಮ ಸ್ಕೂಲು ಕಟ್ಟಡಕ್ಕಾಗಿ ಗೋಪಾಲಯ್ಯ ೧೦,೦೦೦ ರೂಪಾಯಿಗಳನ್ನು ಕೊಡಲು ಒಪ್ಪಿಕೊಂಡಿದ್ದಾರೆ. ಗವರ್ನರ್ ಬರೋ ದಿವಸ ನೋಡಿಕೊಂಡು ಅದರ ಶಂಕುಸ್ಥಾಪನೆ ಮಾಡಿಸ ಬೇಕೆಂದಿದ್ದೇನೆ."

" ನೀವು ತುಂಬಾ ಉದಾರಿಗಳು ಸ್ವಾಮಿ."

ಎಂದು ಶ್ರೀನಿವಾಸ ಗೋಪಾಲಯ್ಯನವರನ್ನು ಹೊಗಳಿದ. ವಾಕಿಂಗ್ ಮುಗಿಸಿಕೊಂಡು ಎಲ್ಲರೂ ಗೋಪಾಲಯ್ಯನವರ ಮನೆ ತಲುಪಿದರು. ನಾರಾಯಣ ಬಾಗಿಲಲ್ಲೇ ಕಾಲು ತೊಳೆದುಕೊಳ್ಳುವುದಕ್ಕೆ ಬಿಸಿನೀರು ಟವಲು ಕೊಟ್ಟ.

ಅರ್ಧ ಗಂಟೆ ಅದೂ ಇದೂ ಮಾತನಾಡುತ್ತಾ ಕುಳಿತಿದ್ದರು. ' ಎಲೆ ಹಾಕಿದೆ ' ಎಂದು ನಾರಾಯಣ ಹೇಳಿದ. ಎಲ್ಲರೂ ಊಟಕ್ಕೆ ಕುಳಿತರು. ಶ್ರೀನಿವಾಸ ನಿರೀಕ್ಷಿಸಿದಂತೆ ಊಟ ಸಾಧಾರಣ ಅನ್ನ ಸಾರಿನಲ್ಲಿ ಮುಗಿಯಲಿಲ್ಲ. ಸೊಗಸಾದ ಔತಣದೂಟ ಅವರಿಗೆ ಸಿದ್ಧವಾಗಿತ್ತು.

" ನಿನ್ನ ಸಹವಾಸ ಕಷ್ಟಾಪ್ಪ ತಿಂಡಿ ಹಾಕಿ ಊಟ ಕೆಡಿಸಿದೆ. ಈಗ ಈ ಊಟ ಹಾಕಿ ರಾತ್ರಿ ನಿದ್ದೆ ಕೆಡಿಸುತ್ತೀ."

ಎಂದು ಹಾಸ್ಯಮಾಡಿದರು ರಾಜಾರಾಯರು. ಊಟಮಾಡಿ ತೊಟ್ಟಿಯಲ್ಲಿ ತಾಂಬೂಲಚರ್ವಣಕ್ಕೆ ಕುಳಿತಾಗ ರಾಜಾರಾಯರು

"ಗೋಪಾಲ, ಕಾಮಾಕ್ಷಿ ಎಲ್ಲಯ್ಯ. ಆಗಲೇ ಮಲಗಿಬಿಟ್ಟಳೇನು?"

"ಇಷ್ಟು ಬೇಗ. ಒಳಗಿದ್ದಾಳೆ."

"ಕರಿ. ಸ್ವಲ್ಪ ವೀಣೆ ನುಡಿಸಲಿ. ಅವಳ ವೀಣೆ ಕೇಳಿ ಎಷ್ಟೋ ದಿವಸವಾಯ್ತು."

"ಅಮ್ಮಾ, ಕಾಮಾಕ್ಷಿ, ವೀಣೆ ತೊಗೊಂಡು ಬಾಮ್ಮ"

ಎಂದು ಗೋಪಾಲಯ್ಯ ಕೂಗಿದರು. ಮನೆಯಾಳು ವೀಣೆ ತಂದು ತೊಟ್ಟಿಯಲ್ಲಿಟ್ಟ, ಕಾಮಾಕ್ಷಿ ಬಂದು ಕುಳಿತು ಅದನ್ನು ಶ್ರುತಿ ಮಾಡಿಕೊಳ್ಳುವುದಕ್ಕಾರಂಭಿಸಿದಳು.

ಶ್ರೀನಿವಾಸ ಕಾಮಾಕ್ಷಿಯನ್ನು ದಿಟ್ಟಿಸಿ ನೋಡಿದ. ಅವನ ಕಣ್ಣು ಕುಕ್ಕಿದುದು ಕಾಮಾಕ್ಷಿಯ ರೂಪವೋ, ಅಲಂಕಾರವೋ ತಿಳಿಯದು. ಕಿವಿಯಲ್ಲಿ ವಜ್ರದೋಲೆ, ಕೊರಳಲ್ಲಿ ವಜ್ರದ ಸರ, ಕೈಗಳಲ್ಲಿ ಕೆಂಪಿನ ಬಳೆಗಳು, ಸೊಂಟದಲ್ಲಿ ಗೆಜ್ಜೆಸುತ್ತಿನ ಡಾಬು. ಅವಳು ಉಟ್ಟಿದ್ದುದು ಎಣ್ಣೆಗೆಂಪು ಬಣ್ಣದ ಸಾಧಾರಣ ಕಾಶೀ ಪೀತಾಂಬರ.

ಇಂಥ ಜಾಜ್ವಲ್ಯಮಾನ ಅಲಂಕಾರವನ್ನೂ ಕಾಮಾಕ್ಷಿಯ ರೂಪ ಹಿಮ್ಮೆಟ್ಟಿಸಿತ್ತು. ಸ್ವಲ್ಪ ಎತ್ತರದಾಳು. ಸಂಬೆಯ ಹಣ್ಣಿನ ವರ್ಣ. ನಸು ನೀಳವಾದ ಮೂಗು. ತಲೆಯನ್ನು ಜಗ್ಗಿಸುವಂತಿದ್ದ ತುಂಬಿದ ಕೇಶರಾಶಿ.

ವೀಣೆ ಶ್ರುತಿಮಾಡಿಕೊಂಡು ಸುರಟಿ ರಾಗವನ್ನು ನುಡಿಸಿದಳು. ಅವಳ ದಂತದ ಬೆರಳು ವೀಣೆಯ ಮೆಟ್ಟಿಗಳ ಮೇಲೆ ಹಾದುಹೋಗುತ್ತಿದ್ದರೆ ಬೆಳ್ಳಕ್ಕಿ ತಿಳಿನೀರನ್ನು ಚಿಮ್ಮಿದಂತಾಗುತ್ತಿತ್ತು. ವೀಣೆಯ ನಾದ ಮಾಧುರ್ಯಕ್ಕೆ ಹೊಂದಿಕೊಂಡು ಅವಳು ಹಾಡುತ್ತಿದ್ದರೆ ಕೋಗಿಲೆಗೆ ಕಾಜಾಣ ಶ್ರುತಿ ಕೊಟ್ಟಂತಾಗುತ್ತಿತ್ತು. ಶ್ರೀನಿವಾಸ ವಿಸ್ಮಯಗೊಂಡ. ತನ್ನ ಕಣ್ಣು ಕಿವಿಗಳೇ ತನಗೆ ಮೋಸಮಾಡುತ್ತಿವೆಯೋ ಎಂದು ಯೋಚಿಸಿದ. ಕಾಮಾಕ್ಷಿ ಶ್ರೀನಿವಾಸನ ಹೃದಯವೀಣೆಯನ್ನೇ ಮಿಡಿದಿದ್ದಳು. ಒಂದೆರಡು ಕೀರ್ತನೆ ಮುಗಿದ ಮೇಲೆ

"ಸಾಕು ತಾಯಿ. ಹೆಚ್ಚು ಆಯಾಸಮಾಡಿಕೊಳ್ಳಬೇಡ"

ಎಂದು ರಾಜಾರಾಯರು ಹೇಳಲು ಕಾಮಾಕ್ಷಿ ಎದ್ದು ಒಳಗೆ ಹೋದಳು. ಮಿಂಚು ಅರೆಕ್ಷಣ ಸುಳಿದು ಕಣ್ಣು ಕುಕ್ಕಿ ಮಾಯವಾದಂತಾಯಿತು ಶ್ರೀನಿವಾಸನಿಗೆ.

"ಕಾಮೂ ವೀಣೆ ಹೇಗೆ ನುಡಿಸುತ್ತಾಳೆ ಶ್ರೀನಿವಾಸರಾವ್"

ಎಂದು ರಾಜಾರಾಯರು ಕೇಳಿದರು.

"ಕೇಳುವುದೇನು ಸಾರ್. ಪಳಗಿದ ಕೈ."

"ನೀವು ಮೈಸೂರಿನವರಪ್ಪಾ. ಬಡಪಟ್ಟಿಗೆ ಇತರರ ವೀಣೆ ಒಪ್ಪುವವರಲ್ಲ."

"ಇಂಥ ಸಂಗೀತ ಯಾರಾದರೂ ಒಪ್ಪಲೇ ಬೇಕು."

"ಗೋಪಾಲೂ——ನಮ್ಮ ಶ್ರೀನಿವಾಸರಾಯರಿಗೆ ಇನ್ನೂ ಮದುವೆಯಾಗಿಲ್ಲ. ಕಾಮೂಗೂ ಇವರಿಗೂ ಜತೆ ಬಹಳ ಚೆನ್ನಾಗಿ ಒಪ್ಪುತ್ತೆ——ಏನು ಹೇಳುತ್ತಿ."

"ನಾನೇನು ಹೇಳಲಪ್ಪಾ. ಅವರನ್ನು ಕೇಳಿನೋಡು."

"ಏನು ಶ್ರೀನಿವಾಸರಾವ್ ?"

ಶ್ರೀನಿವಾಸ ಚಕಿತನಾದ. ಸೌಂದರ್ಯ, ಸಂಪತ್ತುಗಳ ಅಧಿದೇವತೆ ತನ್ನವಳಾಗುವಳೇ ? ರಾಜಾರಾಯರು ಪರಿಹಾಸ್ಯಮಾಡುತ್ತಿಲ್ಲವಷ್ಟೆ.

"ಏನು ಸಾರ್ ?"

"ಕಾಮಾಕ್ಷಿಯನ್ನು ಒಪ್ಪಿರುವಿರಾ ? ಅವಳೂ ಐದನೆಯ ಫಾರಂ ತನಕ ಓದಿದ್ದಾಳೆ."

'ಸಂತೋಷ' ಎಂದು ಬಿಡಬೇಕೆಂದು ಶ್ರೀನಿವಾಸ ಯೋಚಿಸಿದ. ಮರುಕ್ಷಣವೇ

"ಊರಿಗೆ ಕಾಗದ ಬರೆಯುತ್ತೇನೆ ಸಾರ್. ಯೋಚನೆಮಾಡಿ ತಿಳಿಸುತ್ತೇನೆ."

"ಹಾಗೇ ಮಾಡಿ. ಅವಸರವೇನೂ ಇಲ್ಲ"

ಎಂದರು ಗೋಪಾಲಯ್ಯ.

"ಇನ್ನು ನಾವು ಹೊರಡಬಹುದೋ ?"

"ತಡೀ ರಾಜೂ, ಗಾಡಿ ಕಳುಹಿಸುತ್ತೇನೆ."

"ಗಾಡಿ ಏಕಯ್ಯ. ಬೆಳದಿಂಗಳು ದಿವ್ಯವಾಗಿದೆ. ಊಟವೂ ಭಾರಿಯಾಯಿತು. ವಾಕಾಡಿಕೊಂಡು ಹೋಗುತ್ತೇವೆ."

"ನಿಮ್ಮ ಇಷ್ಟ"

ಎಂದರು ಗೋಪಾಲಯ್ಯ. ಅವರು ಹೊರಟುನಿಂತಾಗ ಗೋಪಾಲಯ್ಯ

"ದೊಡ್ಡ ಮನಸ್ಸು ಮಾಡಬೇಕು ಶ್ರೀನಿವಾಸರಾವ್. ಒಬ್ಬಳೇ ಮಗಳು—ಒಳ್ಳೇ ಕಡೆ ಸೇರಲಿ ಎಂದು ನನ್ನ ಅಭಿಲಾಷೆ"

ಎಂದು ಗೋಪಾಲಯ್ಯ ಹೇಳಿದರು.

ದಾರಿಯಲ್ಲಿ ಬರುವಾಗ ರಾಜಾರಾಯರು

"ಏನು ಯೋಚಿಸುತ್ತಿದ್ದೀರಿ ಶ್ರೀನಿವಾಸರಾವ್."

"ಏನೂ ಇಲ್ಲ ಸಾರ್."

"ನನ್ನ ಮಾತು ಕೇಳಿ ನೀವು ಈ ಸಂಬಂಧ ಒಪ್ಪಿಕೊಳ್ಳಿ. ಅನಾಯಾಸವಾಗಿ ಧನಲಕ್ಷ್ಮಿ ಮನೆಗೆ ಬರುತ್ತಾಳೆ."

"ನಮ್ಮ ತಾಯಿಯೊಬ್ಬರು 'ಹೂ' ಅಂದರಾಯಿತು ಸಾರ್."

"ನಾಳೆ ಟೆಲಿಗ್ರಾಂ ಮಾಡಿ ಕರಸಿ"

"ಅವರದು ಮಡಿ—ಆಚಾರ. ಕರೆಸಿದರೆ ಅವರನ್ನು ಎಲ್ಲಿ ಇರಿಸುವುದು."

"ಅದಕ್ಕಿಷ್ಟು ಯೋಚನೆಯೇ. ನಮ್ಮ ಮನೆಯಲ್ಲಿರಲಿ. ಅವರು ಇರುವ ತನಕ ನೀವೂ ಬಂದು ಅಲ್ಲೇ ಇದ್ದು ಬಿಡಿ."

"ಹಾಗೇ ಆಗಲಿ, ನಾಳೆ ಕಾಗದ ಬರೆಯುತ್ತೇನೆ."

"ಕಾಗದ ಬೇಡ ಒಂದು ಎಕ್ಸ್‌ಪ್ರೆಸ್ ವೈರ್ ಮಾಡಿ."

"ವೈರ್ ಮಾಡಿದರೆ ಅವರು ಹೆದರಿಕೊಳ್ಳುತ್ತಾರೆ ಸಾರ್. ಹಳೇ ಕಾಲದ ಜನ."

"ಆಯ್ತು ಎಕ್ಸ್‌ಪ್ರೆಸ್ ಡಿಲಿವರಿ ಕಾಗದ ಬರೆಯಿರಿ. ಖಂಡಿತವೋ ?"

"ಖಂಡಿತ ಬರೆಯುತ್ತೇನೆ ಸಾರ್."

ತನ್ನ ರೂಮು ಸೇರಿ ಶ್ರೀನಿವಾಸ ಯೋಚಿಸುತ್ತ ಕುಳಿತ. ಅವನಿಗಾಗಿದ್ದ ಅನುಭವದಲ್ಲಿ ನಿದ್ದೆ ಬರುವ ಸಂಭವವೇ ಇರಲಿಲ್ಲ. 'ಎಂಥ ಅದೃಷ್ಟ'

ಎಂದುಕೊಂಡ. 'ಇನ್ನು ನಾನು ಎಲ್.ಎಲ್.ಬೀಗೂ ಹೋಗಬಹುದು. ಲಂಡನ್ನಿಗೂ ಹೋಗಬಹುದು' ಎಂದು ಹಿಗ್ಗಿದ. 'ಆದರೆ ಗೌರಿ ಗತಿ?— ಗತಿಯೇನು ತೌರುಮನೆಗೆ ಹೋಗುತ್ತಾಳೆ.'—'ನಾಳೆ ನಾನು ಮೊದಲೇ ಲಗ್ನವಾಗಿರುವುದು ಗೋಪಾಲಯ್ಯನವರಿಗೆ ಗೊತ್ತಾದರೆ?'—'ಗೊತ್ತಾದರೇನು, ಆದ ಮದುವೆ ಹಿಂದಿರುಗಿಸುವುದಕ್ಕೆ ಬರುತ್ತದೆಯೇ.'

## ೧೭

ಪೋಸ್ಟ್‌ಮನ್ ಬಂದು ಕೂಗಿದಾಗ ಫಣಿಯಮ್ಮ ಮಲಗುವುದಕ್ಕೆ ಚಾಪೆ ಸುರುಳಿ ಉರುಳಿಸುತ್ತಿದ್ದರು.

"ಅಮ್ಮಾ—ಕಾಗದ"

"ಕೊಡಪ್ಪಾ."

"ಎಕ್ಸ್‌ಪ್ರೆಸ್ ಡಿಲಿವರಿ. ರುಜು ಹಾಕಬೇಕು."

"ರುಜು ಹಾಕೋದಕ್ಕೆ ಬರೋದಿಲ್ಲವಲ್ಲೋ?"

"ಹೆಬ್ಬೆಟ್ಟಿನ ಗುರುತು ಹಾಕಿ."

ಹೆಬ್ಬೆಟ್ಟಿನ ಗುರುತುಹಾಕಿ ಕಾಗದ ತೆಗೆದುಕೊಂಡು ಅದನ್ನು ಓದಿಸುವುದಕ್ಕೆ ಪಕ್ಕದ ಮನೆಗೆ ಹೋದರು. ವೆಂಕಮ್ಮ ಕಾಗದ ಓದಿ ಹೇಳಿದರು.

ಮಾ. ಶ್ರೀಯುವರ ಚರಣಸನ್ನಿಧಾನಂಗಳಿಗೆ. ಬಾಲಕನ ಅನೇಕಾನೇಕ ನಮಸ್ಕಾರಗಳು. ಉಭಯಕುಶಲೋಪರಿ ಸಾಂಪ್ರತ.

ನಿಮ್ಮ ಆಶೀರ್ವಾದದಿಂದ ನಾನು ಆರೋಗ್ಯವಾಗಿದ್ದೇನೆ. ಹೆಡ್ ಮೇಸ್ಟರು ತುಂಬ ಒಳ್ಳೆಯವರು. ನನ್ನ ಎಲ್ಲಾ ಅನುಕೂಲಗಳನ್ನೂ ನೋಡಿಕೊಳ್ಳುತ್ತಿದ್ದಾರೆ. ನಿಮ್ಮನ್ನು ಕರಿಸಿಕೊಳ್ಳಬೇಕೆಂದು ಆಗ್ರಹ ಮಾಡುತ್ತಿದ್ದಾರೆ.

ಈ ಕಾಗದ ಕಂಡ ರಾತ್ರಿಯೇ ಹೊರಟು ನೀವು ಗುಂತಕಲ್ ಮಾರ್ಗವಾಗಿ ಹೊಸಪೇಟೆಗೆ ಬರಬೇಕು. ಕೂಡಲೆ ಮಾತನಾಡಬೇಕಾದ ವಿಷಯಗಳಿವೆ. ಗಾಬರಿಪಟ್ಟುಕೊಳ್ಳಬೇಡಿ. ನಾನು ಆರೋಗ್ಯವಾಗಿ ಚೆನ್ನಾಗಿದ್ದೇನೆ. ಬೆಂಗಳೂರಿನಿಂದ ಬಿಟ್ಟ ರೈಲು ಹೊಸಪೇಟೆಗೇ ಬರುತ್ತದೆ. ನೀವು ಗುಂತಕಲ್ಲಿನಲ್ಲಿ ಬದಲಾಯಿಸ

ಬೇಕಾಗಿಲ್ಲ. ರಾತ್ರಿ ೯-೩೦ಕ್ಕೆ ಬೆಂಗಳೂರಿನಲ್ಲಿ ಕುಳಿತರೆ ಮಾರನೆಯ ದಿನ ಮಧ್ಯಾಹ್ನ ೧೧-೩೦ಕ್ಕೆ ಹೊಸಪೇಟೆಗೆ ಬರುತ್ತೀರಿ. ನಾನು ಸ್ಟೇಷನ್ ಹತ್ತಿರ ಬರುತ್ತೇನೆ. ನೀವು ಬರುವ ದಿನವನ್ನು ಅಣ್ಣನಿಗೆ ಹೇಳಿ ಟೆಲಿಗ್ರಾಂ ಮಾಡಿಸಿ.

ತಡಮಾಡದೆ ಕಾಗದ ಕೈಗೆ ಬಂದಕೂಡಲೆ ಹೊರಡಬೇಕು.

ಇಂತೀ ನಮಸ್ಕಾರಗಳು

ಶ್ರೀನಿವಾಸ.

ಫಣಿಯಮ್ಮನವರಿಗೆ ಮಗನ ಕಾಗದದ ತಾತ್ಪರ್ಯ ಸರಿಯಾಗಿ ತಿಳಿಯಲಿಲ್ಲ. ನರಸಿಂಹಮೂರ್ತಿ ಮನೆಗೆ ಬಂದಕೂಡಲೆ ಅವನಿಗೆ ಕಾಗದ ತೋರಿಸಿ

''ಏನುಮಾಡಬೇಕು ನರಸಿಂಹಮೂರ್ತಿ" ಎಂದು ಕೇಳಿದರು.

''ಹೋಗಿ ಬಾಮ್ಮ. ಸೀನು ಸುಮ್ಮನೆ ಹಾಗೆ ಬರೆಯುವವನಲ್ಲ. ಏನೋ ಕೆಲಸವಿರಬೇಕು. ರಾತ್ರಿ ಗಾಡೀಗೆ ಇನ್ನೂ ವೇಳೆಯಿದೆ. ನಾನು ನಾಳೆ ಬೆಳಿಗ್ಗೆ ಅವನಿಗೆ ಟೆಲಿಗ್ರಾಂ ಕೊಡುತ್ತೇನೆ.''

'' ಹಾಗೇ ಮಾಡಪ್ಪ ''

ಎಂದರು. ಗೌರಿ ಸುದ್ದಿ ಕೇಳಿ

''ನಿಮ್ಮ ಯಜಮಾನರನ್ನು ಕೇಳಿ ಅಕ್ಕ ಏಕೆ ಬಾ ಅಂದು ಅತ್ತೆಯವರಿಗೆ ಬರೆದಿದ್ದಾರೆ.''

''ಅದನ್ನು ಕಾಗದದಲ್ಲಿ ತಿಳಿಸಿಲ್ಲ ಗೌರ''

''ಕಾಹಿಲೆ ಬಿದ್ದುಬಿಟ್ಟಿದ್ದಾರೋ ಏನೋ ?''

''ಆರೋಗ್ಯವಾಗಿದ್ದೇನೆ ಎಂದು ಬರೆದಿದ್ದಾರೆ ?''

''ನಾವು ಭಯಪಟ್ಟುಕೊಂಡೇವೆಂದು ಹಾಗೆ ಬರೆದಿರಬಹುದು.''

''ನೀನು ಇಲ್ಲದ ಕಳವಳಪಡಬೇಡ ಗೌರ. ನಿನ್ನ ಯಜಮಾನರು ಸುಖವಾಗಿದ್ದಾರೆ.''

''ಅಕ್ಕ ಅವರು ಹೋಗಿ ಏಳುತಿಂಗಳ ಮೇಲಾಯಿತು. ನನಗೆ ಒಂದು ಕಾಗದ ಬರೆದಿಲ್ಲವಲ್ಲ.''

"ನಾನೇನು ಹೇಳಲಿ."

"ನನ್ನ ಮರೆತುಬಿಟ್ಟರೇ ಅಕ್ಕ. ನಾನೇನು ತಪ್ಪುಮಾಡಿದೆ."

"ನಾನು ಅತ್ತೆಮ್ಮನವರಿಗೆ ಹೇಳಿ ನಿನಗೆ ಕಾಗದ ಬರೆಸುವ ಹಾಗೆ ಮಾಡುತ್ತೇನೆ, ಯೋಚನೆಮಾಡಬೇಡ."

ಫಣಿಯಮ್ಮ ರಾತ್ರಿ ಹೊಸಪೇಟೆಗೆ ಹೊರಟುಬಿಟ್ಟರು. ನರಸಿಂಹ ಮೂರ್ತಿ ಅವರನ್ನು ರೈಲಿನಲ್ಲಿ ಹೆಂಗಸರ ಗಾಡಿಯಲ್ಲಿ ಕೂಡಿಸಿ

"ಅಮ್ಮಾ."

"ಏನು ಮಗು."

"ಶೀನೂಗೆ ಹೇಳಿ ಗೌರೀಗೆ ಕಾಗದ ಬರೆಸಮ್ಮ. ಹುಡುಗಿ ಅರೆಜೀವ ಕೊರೆಜೀವವಾಗುತ್ತಿದೆ."

"ಆಗಲಿ—ಮನೆಕಡೆ ಜೋಕೆ. ಅವರಿಬ್ಬರನ್ನೂ ಎಲ್ಲಿಯೂ ಪೋಲಿ ಅಲೆಯೋಕೆ ಹೋಗಬೇಡಿ ಅನ್ನು. ಹಳ್ಳೀಗೆ ಕಾಗದ ಬರೆದು ಕಳುಹಿಸು. ನೀನು ಕಛೇರಿ ಮುಗಿಸಿಕೊಂಡು ಹೊತ್ತು ಮುಳುಗುವ ಹೊತ್ತಿಗೆ ಮನೆಗೆ ಬಂದುಬಿಡು."

"ಆಗಲಮ್ಮ."

"ನಾನು ಹೋದಮೇಲೆ ಕಾಗದ ಬರೆಸುತ್ತೇನೆ. ಮನೆಕಡೆ ಜೋಕೆ."

ರೈಲು ಹೊರಟಿತು.

ಶ್ರೀನಿವಾಸನ ಕೈಗೆ ನರಸಿಂಹಮೂರ್ತಿಯ ಟೆಲಿಗ್ರಾಂ ಸಕಾಲಕ್ಕೆ ತಲ ಪಿತು. ತಾಯಿಯನ್ನು ಕರೆತರಲು ಸ್ಟೇಷನ್ನಿಗೆ ಹೋದ. ಅವರು ಬರುವುದನ್ನೇ ನಿರೀಕ್ಷಿಸಿಕೊಂಡು ರಾಜಾರಾಯರು ಮನೆಯಲ್ಲಿ ನಿಂತರು. ರೈಲು ನಿಲ್ಲುವುದಕ್ಕೆ ಮುಂಚೆಯೇ ಫಣಿಯಮ್ಮ ಕಿಟಕಿಯಿಂದ ಹಣಿಕಿಹಾಕಿ 'ಶೀನೂ' ಎಂದು ಕೂಗಿದರು. ಶೀನೂ ತಾಯಿಯನ್ನು ಇಳಿಸಿಕೊಂಡು, ಗಾಡಿಯಲ್ಲಿ ರಾಜಾ ರಾಯರ ಮನೆಗೆ ಕರೆತಂದ.

"ಚೆನ್ನಾಗಿದ್ದೀಯಾ ನನ್ನಪ್ಪ."

"ಸೊಗಸಾಗಿದ್ದೇನಮ್ಮಾ."

"ನಿನ್ನ ಕಾಗದ ನೋಡಿ ನನಗೆ ಜಂಘಾಬಲವೇ ಉಡುಗಿಹೋಯ್ತು. ಎಷ್ಟು ಬಡವಾಗಿ ಹೋಗಿದ್ದೀಯೋ ಶೀನು—ಹಾಳು ಹೋಟಲು ಊಟ."

"ಮನೆಯಲ್ಲಿ ಎಲ್ಲರೂ ಆರೋಗ್ಯವೇಮ್ಮ."

"ಎಲ್ಲರೂ ಚೆನ್ನಾಗಿದ್ದಾರೆ."

"ಅಣ್ಣ ಊರಿಗೆ ಬಂದಿದ್ದರೇ ?"

"ಇಲ್ಲ. ನರಸಿಂಹಮೂರ್ತಿ ಕಾಗದ ಬರೆದು ತಿಳಿಸು ಎಂದು ಹೇಳಿ ನಿಂತಕಾಲಿನಲ್ಲಿ ಬಂದೆ."

"ನೀನು ಕೂಡಲೆ ಬಂದದ್ದು ಒಳ್ಳೆಯದಾಯಿತಮ್ಮ."

"ಏನೋ ಸಮಾಚಾರ ಮಗೂ."

"ಸ್ನಾನ, ಊಟಮಾಡು. ನಿಧಾನವಾಗಿ ತಿಳಿಸುತ್ತೇನೆ."

"ಹಾಗೇಮಾಡು. ಸದ್ಯ ನೀನು ಹುಷಾರಾಗಿದ್ದೀಯಲ್ಲಾ ಅಷ್ಟೇ ಸಾಕು ನನಗೆ."

ರಾಜಾರಾಯರ ಮನೆಯಲ್ಲಿ ಫಣಿಯಮ್ಮನ ಸ್ನಾನ, ಪೂಜೆ, ಊಟ ತೀರಿದುವು. ಶ್ರೀನಿವಾಸ ಅವಳನ್ನು ತೋಟದ ಒಂದು ಮೂಲೆಗೆ ಕರೆದೊಯ್ದು

"ನೀನು ಒಬ್ಬಳೇ ಬಂದೆ ಎಲ್ಲಿ ನರಸಿಂಹಮೂರ್ತಿನೂ ಕರ್ಕೊಂಡು ಬರ್ತೀಯೋ ಅಂತಾ ಹೆದರಿದ್ದೆ."

"ಅವನು ಬ್ಯಾಂಕು ಬಿಟ್ಟು ಹೇಗೆ ಬರ್ತಾನೆ ಹೇಳು. ರಜಾ ಎಲ್ಲಿಸಿಕ್ಕುತ್ತೆ."

"ಒಳ್ಳೇದಾಯಿತು."

" ಏನು ಸಮಾಚಾರ."

"ಗೌರಿ ಸಮಾಚಾರವೇನಮ್ಮ."

"ಆ ಮೂದೇವಿ ಸಮಾಚಾರವೇನುಕೇಳ್ತೀಬಿಡು. ಅದೊಂದು ನಮ್ಮ ಮನೆ ತೊಳೆಯೋದಿಕ್ಕೆ ಬಂದಿರೋ ಹೆಮ್ಮಾರಿ. ಗುಣ. ನಡತೆ ಒಂದೂ ಚೆಂದಿಲ್ಲ. ನಿಮ್ಮ ತಂದೆ ಮಾತು ಕೇಳಿಕೊಂಡು ತಾನೇ ನಿನ್ನ ತಲೇಮೇಲೆ ಕಲ್ಲು ಎತ್ತಿಹಾಕಿದೆ ಶೀನು."

"ನನಗೂ ಅವಳ ನಡವಳಿಕೆ ಸರಿಬೀಳುತ್ತಿರಲಿಲ್ಲಮ್ಮ. ಅವತ್ತು ನಿನ್ನ ಅವಮಾನಮಾಡಿದ ಮೇಲಂತೂ ನನ್ನ ಮನಸ್ಸು ತುಂಬ ಕೆಟ್ಟುಹೋಯಿತು."

"ಹೀನವಂಶದ ಮುಂಡೇದುಕಣೋ ಶೀನೂ—ನಾವು ತಿದ್ದಿದರೆ ಸರಿ ಹೋಗತ್ತ್ಯೇ? ಎಷ್ಟೋ ಆದರಿಸಿದೆ, ಬುದ್ಧಿ ಹೇಳಿದೆ. ಹಾಳುರಂಡೆ ಒಕ್ಕಲು ಗಿತ್ತೀನ ಕೈಗೆ ಹಾಕಿಕೊಂಡು ಆ ದರಿದ್ರ ಮುಂಡೇಮಗ ಅವರಪ್ಪನ ಮನೆಗೆ

ಅಕ್ಕಿಬೇಳೆ ಸಾಗಿಸುತ್ತಾಳೆ. ಉಪ್ಪು ಸಕ್ಕರೆ ಮಾರಿಸಿ ದುಡ್ಡುಮಾಡಿ ಅವರಮ್ಮನ ಕೈಗೆ ಹಾಕುತ್ತಾಳೆ. ಇಂಥ ಸರ್ಪ ಮನೇಲಿಟ್ಟುಕೊಂಡು ನಾವು ಸಂಸಾರಮಾಡಿ ಮುಂಡಮೋಚಿಕೊಳ್ಳೋದು ಹೇಗೋ ಶೀನೂ ?"

"ಅಷ್ಟು ದಾರಿಗೆ ಬಂದುಬಿಟ್ಟಳೇ."

"ಅದಕ್ಕೆ ಸುಶೀಲನೂ ಷರೀಕು. ಅಕ್ಕನ ಮನೆಗೆ ಕರ್‍ಕೊಂಡುಹೋಗಿ ಈ ತಿರುಬೋಕಿಗೆ ಒಂದು ಸೀರೆ ಕೊಡಿಸಿದಳು ನೋಡು. ಅವತ್ತಿನಿಂದ ಸುಶೀಲ ಗೌರಿ ಇಬ್ಬರ್‍ಗೂ ಅವರ ಅನ್ಯೋನ್ಯ. ಸ್ನೇಹ ಹೇಳತೀರದು. ಮುಂಕು ಮುಂಡೇದು ಈ ನರಸಿಂಹ, ಹೆಂಡತಿ ಬಿಳಿ ತೊಗಲು ನೋಡಿಕೊಂಡು ಬಾಯಿ ಬಾಯಿ ಬಿಡತ್ತೆ."

"ಹಾಗಾದರೆ ಏನು ಮಾಡೂಂತೀಯಮ್ಮ ?"

"ಏನೂ ಇಲ್ಲ ನಿನಗೆ ಅಣಿಯಾದ ಕಡೆ ನೋಡಿ ಬೇರೆ ಮದುವೆ ಮಾಡೋದೆಂದು ನಾನು ನಿಶ್ಚಯಿಸಿದ್ದೇನೆ. ನಿನ್ನ ಮನಸ್ಸಿನಲ್ಲಿ ಏನಿದೆ ಹೇಳು."

"ನನ್ನ ಮನಸ್ಸಿನಲ್ಲಿಯೂ ಅದೇ ಇದೆ ಇನ್ನು ನಾನು ಒಬ್ಬಂಟಿಗನಾಗಿರುವುದು ಚೆನ್ನಾಗಿ ಕಾಣಲ್ಲ."

"ಉಂಟೇ ? ನೋಡಿದವರು ನಮ್ಮನ್ನು ಏನನ್ನುತ್ತಾರೆ."

"ನಮ್ಮ ಹೆಡ್‌ಮಾಸ್ಟರು ಒಂದುಕಡೆ ನೋಡಿದ್ದಾರೆ. ನೀನು ಬರಲಿ ಮುಂದೆ ಮಾತು ಅಂತ ಅವರ ಹತ್ತಿರ ಹೇಳಿದ್ದೇನೆ."

"ಯಾರವರು ?"

"ಗೋಪಾಲಯ್ಯಾಂತ ಇಲ್ಲಿ ಭಾರಿ ಶ್ರೀಮಂತರು. ನೈಲಿಮೈಲಿ ಕಬ್ಬಿನ ಗದ್ದೆ ಇದೆ. ಒಬ್ಬಳೇ ಮಗಳು. ಹುಡುಗಿ ಕಿವಿಯಲ್ಲಿರೋ ವಜ್ರದ ವಾಲೇನೆ ೪-೫ ಸಾವಿರ ರೂಪಾಯಿ ಬೆಲೆ ಬಾಳತ್ತೆ."

"ವರದಕ್ಷಿಣೆ ಏನು ಕೊಡುತ್ತಾರಂತೆ !"

"ಏನುಬೇಕಾದರೂ ಕೊಡುತ್ತಾರಮ್ಮ. ಅವರ ಆಸ್ತಿಯೆಲ್ಲಾ ಮಗಳಿಗೆ, ಮಗಳ ಗಂಡನಿಗೆ ತಾನೆ ಹೋಗುತ್ತೆ."

"ಅಷ್ಟು ಶ್ರೀಮಂತರೇ ?"

"ಐದುಲಕ್ಷ ನಗದಿದೆ ಎಂದು ಹೇಳುತ್ತಾರೆ."

"ಹುಡುಗಿಯನ್ನು ನಾನು ಯಾವಾಗ ನೋಡೋದು."

“ಇವತ್ತೀ ಸಂಜೆಗೆ. ನೀನು ಹೂ ಅಂದರೆ ಹದಿನೈದು ದಿವಸದಲ್ಲಿ ಲಗ್ನವಾಗಿ ಹೋಗತ್ತೆ.”

“ಅಷ್ಟು ಅಣಿಯಾಗಿದ್ದರೆ ಬಿಡೋದ್ಯಾಕೋ ಶೀನೂ.”

“ಅಪ್ಪ ಏನನ್ನುತ್ತಾರೆಯೋ?”

“ಸರಿ. ಅವರದೇನು ಬಿಡು. ಮದುವೆಯಾದ ಮೇಲೆ ಅವರ ಕಿವಿ ಮೇಲೆ ಈ ಸುದ್ದಿ ಹಾಕೋದು ಒಳ್ಳೆಯದು.”

“ಹಸೇಮೇಲೆ ಕೂಡುವವರು.”

“ನಿನ್ನ ಹೆಡ್‌ಮಾಸ್ಟರು, ಅವರ ಹೆಂಡತಿ.”

“ಅಪ್ಪ ಬಂಲ್ಲಾ ಅನ್ನೋದು ಅವರಿಗೆ ಹೇಗೆ ತಿಳಿಸೋದು.”

“ನಾನೆಲ್ಲಾ ನೋಡಿಕೊಳ್ಳುತ್ತೀನೆ. ಸುಮ್ಮನಿರು. ನಿನಗ್ಯಾಕೆ ಯೋಚನೆ.”

ಸಂಜೆ ಗೋಪಾಲಯ್ಯ ಭರ್ಜರಿ ಎತ್ತಿನ ಜತೆ ಕಟ್ಟಿದ ತಮ್ಮ ಪೆಟ್ಟಿಗೆ ಗಾಡಿ ಕಳುಹಿಸಿಕೊಟ್ಟರು. ರಾಜಾರಾಯರು, ಶ್ರೀನಿವಾಸ, ಫಣಿಯಮ್ಮ ಗೋಪಾಲಯ್ಯನವರ ಮನೆಗೆ ಹೊರಟರು.

ಭಾವೀ ಬೀಯಗಿತ್ತಿಯನ್ನು ಗೋಪಾಲಯ್ಯನವರ ಕುಟುಂಬ ಇಂದಿರಮ್ಮ ಎದುರುಗೊಂಡು ಒಳಗೆ ಕರೆದೊಯ್ದರು. ಕಾಮಾಕ್ಷಿ ಬಂದು ಫಣಿಯಮ್ಮನವರ ಕಾಲುಮುಟ್ಟಿ ನಮಸ್ಕಾರಮಾಡಿದಳು. ಮಡಿಯಲ್ಲೀ ಮಾಡಿದ್ದ ಕಾಫಿ, ತಿಂಡಿಗಳನ್ನು ಇಂದಿರಮ್ಮ ಫಣಿಯಮ್ಮನವರಿಗೆ ಕೊಟ್ಟರು. ಫಣಿಯಮ್ಮ ಅವರ ಮನೆಯ ವೈಭವ, ಇಂದಿರಮ್ಮ ಕಾಮಾಕ್ಷಿಯರ ಮೇಲಿದ್ದ ಜವಾಹಿರಿ ರಾಶಿಯನ್ನು ಕಂಡು ಬೆಕ್ಕಸಬೆರಗಾದರು.

“ನಮ್ಮ ಹುಡುಗಿಯನ್ನು ಮಡಿಲಿಗೆ ಹಾಕಿಕೊಂಡು ಕಾಪಾಡಬೇಕು ಫಣಿಯಮ್ಮನವರೇ. ಕಾಮಾಕ್ಷೀನೇ ನಮಗೆ ಮಗ—ಮಗಳು ಎಲ್ಲಾ.”

“ಮನೆಗೆ ಲಕ್ಷ್ಮೀದೇವಿ ಬರ್ತಾಳೇಂದ್ರೆ ಬೇಡ ಅನ್ನುತ್ತೀನೆಯೇಮ್ಮ.”

“ಲಗ್ನ ಯಾವಾಗ ನಿಶ್ಚಯಿಸೋಣ.”

“ನಿಮಗೆ ಯಾವಾಗ ಅನುಕೂಲವೋ ಆಗ.”

“ನಾನು ನಾಳೆಯೇ ಮಾಡುವುದಕ್ಕೆ ಸಿದ್ಧ.”

“ಆಗಿ ಹೋಗಲಿ. ಶುಭಸ್ಯ ಶೀಘ್ರಂ.”

"ನಿಮ್ಮ ಯಜಮಾನರು, ಜನ ಬರಬೇಡವೇ?"

"ಅವರಿಗೆ ಮುಂದಿನ ವೈಶಾಖದ ತನಕ ಪುರಸತ್ತು ಆಗಲ್ಲ. ಕೈತುಂಬ ಕೆಲಸ. ಒಂದು ಕ್ಷಣ ಹಳ್ಳಿ ಬಿಡುವುದು ಸಾಧ್ಯವಿಲ್ಲ."

"ಹಸೆಯ ಮೇಲೆ ಕೂಡುವವರು ಯಾರು?"

"ಹೆಡ್‌ಮಾಸ್ತರು, ಅವರ ಹೆಂಡತಿ."

"ನೀವಿರುವಾಗ ಅವರು ಹೇಗೆ ಕೂಡುತ್ತಾರೆ."

"ನಮಗೇ ನೀವು ಕಾದು ಕೂತರೆ ತುಂಬ ತಡವಾಗತ್ತೆ. ನಾನು ಅವರಿಗೆ ಬರೆಸುತ್ತೇನೆ. ಆ ಹೊತ್ತಿಗೆ ಅವರು ಬಂದರೆ ಸರಿಹೋಯ್ತು—ಬರದೇ ಹೋದರೆ ಹೆಡ್‌ಮಾಸ್ತರು, ಅವರ ಹೆಂಡತಿ ಕೂಡುತ್ತಾರೆ."

"ಆಗಬಹುದು. ಎರಡು ಖರ್ಚೂ ನಮ್ಮದೇ. ನೀವು ಯಾವ ತೊಂದರೆಯನ್ನೂ ತೆಗೆದುಕೊಳ್ಳಬೇಡಿ."

"ಹಾಗಂದರಾಗುತ್ತದೆಯೇ. ನಾವು ಇಡೋದು ಇಡಬೇಕು."

"ಅದಕ್ಕೆಲ್ಲಾ ವೇಳೆ ಎಲ್ಲಿದೇಂದ್ರೆ. ನಿಮ್ಮ ಮನೆಗೆ ಸೊಸೆ ಬಂದ ಮೇಲೆ ಬೇಕಾದ್ದು ಮಾಡಿಸಿಡಿ."

"ಅದೂ ನಿಜವೇ. ನಮಗೂ ಶೀನೂ ಮದುವೆ ಸುಮ್ಮನೆ ಮುಂದೆ ತಳ್ಳೋದು ಇಷ್ಟವಿಲ್ಲ."

"ನಾಳೆ ಪುರೋಹಿತರನ್ನು ಕರೆಸಿ ಲಗ್ನ ಇಡಿಸಿಬಿಡುತ್ತೇನೆ."

"ಧಾರಾಳವಾಗಿ."

ಇಂದಿರಮ್ಮ ಯಜಮಾನರನ್ನು ಒಳಗೆ ಕರೆದು ಫಣಿಯಮ್ಮ ಒಪ್ಪಿಕೊಂಡ ಸುದ್ದಿ ಮುಟ್ಟಿಸಿದರು. ಅದನ್ನು ಅವರು ಕೂಡಲೆ ರಾಜಾರಾಯರಿಗೆ ತಿಳಿಸಿದರು. ಎಲ್ಲರೂ ಅಲ್ಲೇ ಸಂತೋಷವಾಗಿ ಊಟಮಾಡುವುದೆಂದು ಇತ್ಯರ್ಥವಾಯಿತು.

## ೧೮

ಅತ್ತೆ ಮನೆಬಿಟ್ಟು ತೊಲಗಿದ್ದು ಒಳ್ಳೆಯದಾಯಿತೆಂದು ಸುಶೀಲಾ ಸಂತೋಷಪಟ್ಟಳು. 'ದೇವರೇ—ಒಂದು ತಿಂಗಳು, ಎರಡು ತಿಂಗಳು ಅವರು ಇಲ್ಲಿಗೆ ಬಾರದಂತೆ ಮಾಡು' ಎಂದು ಪ್ರಾರ್ಥಿಸಿದಳು. ಗೌರಿಯನ್ನು ಕರೆದುಕೊಂಡು ಅವರ ತಾಯಿ ಮನೆಗೆ ಹೋಗಿ ಬಿಟ್ಟುಬಂದಳು.

ರಂಗಮ್ಮ ಮಗಳ ಕೈಮೇಲಿದ್ದ ಸುಟ್ಟಗಾಯದ ಗುರುತನ್ನು ಕಂಡು

"ಇದೇನಮ್ಮಾ."

"ಉರಿ ಮಾಡುವಾಗ ಕೊಳ್ಳಿ ತಾಕಿತಮ್ಮಾ."

"ನನಗೊಂದು ಮಾತು ಹೇಳಿ ಕಳಿಸಬಾರದಾಗಿತ್ತೇನೆ ಗೌರಾ."

"ಏನು ದೊಡ್ಡ ವಿಷಯಾಂತ ನಿನಗೆ ಹೇಳಿ ಕಳಿಸಲಿ."

"ಗೌರಾ, ನಿನ್ನ ನೋಡಿ ಹೊಟ್ಟೆ ಹೇಗೆ ಹಿಡಿದುಕೊಳ್ಳಲೀ?"

"ಯಾಕಮ್ಮಾ—ಏನಾಗಿದ್ದೀನಿ?"

"ಏನೂ ಆಗಿಲ್ಲಮ್ಮ—ಚೆನ್ನಾಗಿದ್ದೀ. ಮನೆಯಲ್ಲಿ ಸುಖವಾಗಿದ್ದೀಯಾ. ನನ್ನಲ್ಲಿ ಮುಚ್ಚುಮರೆ ಮಾಡಬೇಡ ಹೇಳು?"

"ಸುಖವಾಗಿದ್ದೀನಮ್ಮಾ."

"ನಿಮ್ಮ ಯಜಮಾನರು ಕಾಗದ ಬರೆಯುತ್ತಿದ್ದಾರೆಯೇ."

"ದಿನ ಬಿಟ್ಟು ದಿನ ತಪ್ಪದೆ ಬರೆಯುತ್ತಿದ್ದಾರೆ."

"ನಿನ್ನ ಯಾವಾಗ ಕರೆಸಿಕೊಳ್ಳುತ್ತಾರಂತೆ."

"ಈ ಸಲ ರಜಾ ಬಂದಾಗ ಅವರೇ ಬಂದು ಕರೆದುಕೊಂಡು ಹೋಗ್ತಾರಂತೆ. ಅತ್ತೆಮ್ಮನವರು ಹೋಗಿದ್ದಾರೆ."

ಮನೆಗೆ ಹಿಂದುರಿಗಿದ ಮೇಲೆ ಸುಶೀಲಾ ಗೌರನನ್ನು ನೋಡಿ

"ನಿನಗೆ ಇಷ್ಟು ಚೆನ್ನಾಗಿ ಸುಳ್ಳು ಹೇಳೋದಿಕ್ಕೆ ಬರತ್ತೇಂತ ನನಗೆ ಗೊತ್ತಿರಲಿಲ್ಲಮ್ಮ" ಎಂದಳು.

"ಇನ್ನೇನು ಹೇಳಲಿ ಅಕ್ಕಾ—ಅಮ್ಮ ಇನ್ನೂ ನಾಲ್ಕುದಿನ ಬದುಕಿರಲಿ ಎಂತ ನನ್ನ ಆಸೆ."

"ಸರಿಯಮ್ಮ."

ಎಂದು ಸುಶೀಲ ಸುಮ್ಮನಾದಳು

ಗೌರಿ ಗಂಡನ ಕಾಗದ ಕಾಯುವುದನ್ನು ಬಿಟ್ಟುಬಿಟ್ಟಳು ಅವಳಿಗೆ ಅದೇ ಮನೋರೋಗ ಹಿಡಿಯಿತು. ಮಂಕು ಹಿಡಿದ ಹಾಗೆ ಒಂದು ಕಡೆ ಗಂಟೆಗಟ್ಟಳೆ ಕುಳಿತು ಬಿಡುತ್ತಿದ್ದಳು.

ಗೌರಿ ನೆನಪು ಕೂಡ ಶ್ರೀನಿವಾಸನಿಗೆ ಮರೆತುಹೋಯಿತು. ಅವನೂ ಫಣಿಯಮ್ಮಾ ಸಂಚು ಮಾಡಿದಂತೆ ಎಲ್ಲ ಕೆಲಸ ಕಾರ್ಯಗಳೂ ನೆರವೇರಿದ್ದುವು.

ಹೆಡ್ ಮಾಸ್ಟರು, ಅವರ ಹೆಂಡತಿ ಗಂಡಿನ ಕಡೆ ಹಸೆಯ ಮೇಲೆ ಕುಳಿತು ಧಾರೆ ಯೆರಸಿಕೊಂಡರು. ಗೋಪಾಲಯ್ಯ ಎಲ್ಲರಿಗೂ ಮನದಣಿಯ ಉಡುಗೊರೆ ಗಳನ್ನಿತ್ತು ಸಂತೋಷಪಡಿಸಿದರು.

ಮದುವೆಯಾದ ಮೇಲೆ ಫಣಿಯಮ್ಮ, ಶ್ರೀನಿವಾಸ ಗೋಪಾಲಯ್ಯ ನವರ ಮನೆಯಲ್ಲಿ ಇರುತ್ತಿದ್ದರು. ಶ್ರೀನಿವಾಸ ನೆಪಮಾತ್ರಕ್ಕೆ ಶಾಲೆಗೆ ಹೋಗಿ ಬರುತ್ತಿದ್ದ.

ಫಣಿಯಮ್ಮ ಬಂದು ಬಹಳ ದಿವಸಗಳಾಗಿತ್ತು. ಊರಿಗೆ ಹೋಗಲು ಚಡಪಡಿಸತೊಡಗಿದರು. ಬೀಯಗಿತ್ತಿಗೆ,

"ಶೀನೂ ಕಿಸಮಿಸಿ ರಜಕ್ಕೆ ಊರಿಗೆ ಬರುತ್ತಾನೆ. ಅವನ ಜತೆ ಕಾಮಾಕ್ಷಿ ಕಳಿಸಿಕೊಡಿ. ಅವನು ರಜ ಮುಗಿಸಿಕೊಂಡು ಬರುವಾಗ ಅವಳೂ ಬರುತ್ತಾಳೆ."

ಎಂದು ಹೇಳಿದರು ಇಂದಿರಮ್ಮ 'ಹಾಗೇ ಆಗಲಿ' ಎಂದು ಒಪ್ಪಿ ಕೊಂಡರು. ಫಣಿಯಮ್ಮ ಔತಣ ಮಾಡಿಸಿಕೊಂಡು, ಉಡುಗೊರೆ ತೆಗೆದು ಕೊಂಡು ಊರಿಗೆ ಪ್ರಯಾಣಬೆಳಸಿದರು. ಮಗನಿಗೆ ಅಕಸ್ಮಾತ್ತಾಗಿ ಲಭಿ ಸಿದ ಸಿರಿಯನ್ನು ಕಂಡು ಅವರ ತಲೆ ಆಕಾಶಕ್ಕೆ ಹಾರಿತ್ತು. ಆದರೆ ಊರಿ ನಲ್ಲಿ ತಾವು ನಿರ್ವಹಿಸಬೇಕಾಗಿದ್ದ ಕೆಲಸವನ್ನು ಜ್ಞಾಪಿಸಿಕೊಂಡು ಒಮ್ಮೊಮ್ಮೆ ನಡುಗುತ್ತಿದ್ದರು.

ಮನೆಗೆ ಬಂದವರೇ ಫಣಿಯಮ್ಮ ಗೌರನ ಸ್ಥಿತಿ ಕಂಡು ಗಾಬರಿ ಯಾದರು. ಇದನ್ನು ಹೀಗೇ ಬಿಟ್ಟರೆ ಅಪಖ್ಯಾತಿ ಬರುವುದೆಂದು ಯೋಚಿಸಿ ಕೂಡಲೆ ರಂಗಮ್ಮನಿಗೆ ಹೇಳಿಕಳುಹಿಸಿದರು.

"ಡಾಕ್ಟರು ಏನು ಹೇಳಿದರು ಫಣಿಯಮ್ಮನವರೇ-"

"ಏನೂ ಹೇಳಲ್ಲಮ್ಮ. ಮೈಯಲ್ಲಿ ಏನೂ ಕಾಹಿಲೆಯಿಲ್ಲ ಎನ್ನುತ್ತಾರೆ. ಎಲ್ಲೋ ಬೆದರಿಯೋ ಬೆಚ್ಚಿಯೋ ಮಾಡಿದ್ದಾಳೆ."

"ನಾಲ್ಕುದಿವಸ ನಾನು ಕರೆದುಕೊಂಡು ಹೋಗಲೇ?"

"ಮಹಾರಾಯ್ತಿಯಾಗಿ ಕರೆದುಕೊಂಡು ಹೋಗಿ. ನವಗ್ರಹಜಪ ಮಾಡಿಸೀಂದ್ರೆ."

"ನಿಮ್ಮ ಮಕ್ಕಳು ಚೆನ್ನಾಗಿದ್ದಾರೆಯೋ?"

“ ಚೆನ್ನಾಗಿದ್ದಾನೆ ”

“ ಗೌರನ್ನ ಯಾವಾಗ ಕರಸಿಕೊಳ್ಳುತ್ತಾರಂತೆ.”

“ ಕಿಸ್‌ಮಿಸ್ ರಜಕ್ಕೆ ಬರುತ್ತಾನೆ. ಆಗ ಎಲ್ಲಾ ಇತ್ಯರ್ಥಮಾಡೋಣ.”

“ ನೀವು ಯಾವಾಗ ಹೇಳಿದರೂ ಕಳಿಸಿಕೊಡ್ತೀನೀಂದ್ರೆ ಗೌರನ್ನ. ಏನೂ ತಿಳಿದುಕೊಳ್ಳಬೇಡಿ.”

“ ತಿಳಿದುಕೊಳ್ಳುವುದಕ್ಕೆ ಏನಿದೆಯಮ್ಮ. ಮುಖ್ಯ ಹುಡುಗಿ ಮೊದಲಿನ ಹಾಗಾದರೆ ಸಾಕು.”

ಎಂದು ಫಣಿಯಮ್ಮ ಹೇಳಿದರು. ಸುಬ್ಬರಾಯರು ಮಾರನೆಯ ದಿನ ಬಂದು ಗೌರಿಯನ್ನು ಕರೆದುಕೊಂಡು ಹೋದರು.

ಫಣಿಯಮ್ಮ ಕೂಡಲೆ ಗಂಡನನ್ನು ಹಳ್ಳಿಯಿಂದ ಕರೆಸಿದರು. ಎಲ್ಲರೂ ಊಟಮಾಡಿ ಮಲಗಿದ ಮೇಲೆ ರಾತ್ರಿ

“ ಒಂದು ವಿಷಯಾಂದ್ರೆ.”

“ ಏನೇ ಅಂಥ ಗುಟ್ಟು ?”

“ ಇದೆ... ಮೆಲ್ಲಗೆ ಮಾತನಾಡಿ. ಸುಶೀಲಂದು ಹಾವಿನ ಕಿವಿ.”

“ ಏನು, ಇದ್ದಕ್ಕಿದ್ದಂತೆ ಹೊಸಪೇಟೆ ಯಾತ್ರೆ ಮಾಡಿಕೊಂಡು ಬಂದೆ.”

“ ಮಗೂನ ನೋಡಬೇಕೂ ಅನ್ನಿಸಿತು.”

“ ಸರಿ. ಚೆನ್ನಾಗಿದ್ದಾನಷ್ಟೇ.”

“ ಈಗವನಿಗೇನೂಂದ್ರೆ. ಕುಬೇರನಾಗಿದ್ದಾನೆ.”

“ ಏನೇ ನೀನು ಮಾತನಾಡೋದು—ನನಗೊಂದೂ ಅರ್ಥವಾಗಲ್ಲ.”

“ ನಿಮ್ಮನ್ನ ಕೇಳದೆ ಒಂದು ಕೆಲಸಮಾಡಿದ್ದೀನೀಂದ್ರೆ. ಏನೂ ಅಂದುಕೊಳ್ಳಬೇಡಿ.”

“ ಆ ಅಭ್ಯಾಸವೇ ನನ್ನಲ್ಲಿಲ್ಲವಲ್ಲ.”

“ ಶೀನೂಗೆ ಬೇರೆ ಮದುವೆ ಮಾಡಿಸಿದೇಂದ್ರೆ.”

“ ಹಾ ! ಬೇರೆ ಮದುವೆ.”

“ ಹೌದು. ಸೊಗಸಾದ ಬೀಗತನ. ಅವನ ಮಾವ ಲಕ್ಷಾಂತರ ರೂಪಾಯಿ ಆಸ್ತಿವಂತ. ಒಬ್ಬಳೇ ಮಗಳು; ಸಾಕ್ಷಾತ್ ಲಕ್ಷ್ಮಿ ಇದ್ದ ಹಾಗಿದ್ದಾಳೆ.”

"ಏನೇ ಇದು."

"ಇಲ್ಲಿ ನೋಡಿ. ನನಗೆ ಕೊಟ್ಟಿರೋ ಉಡುಗೊರೆಯನ್ನ."

ಎಂದು ಪೆಟ್ಟಿಗೆ ತೆಗೆದು ತಮ್ಮ ಸೀರೆಗಳನ್ನು ತೋರಿಸಿದರು.

"ಹುಡುಗಿಗೆ ೩೦,೦೦೦ ನಗ ಹಾಕಿದ್ದಾರೆ. ಶೀನು ಈಗ ರಾಜ ಕುಮಾರನ ಹಾಗಿದ್ದಾನೆ."

"ಅಲ್ಲವೇ, ಗೌರೀ ಗತಿ."

"ಮೂದೇವಿ. ತೌರು ಮನೆಯಲ್ಲಿ ಉಪಕರಣೆ ಕೊಳೆದುಕೊಂಡು ಬಿದ್ದಿರತ್ತೆ."

"ನೋಡಿದವರು ಏನಂದುಕೊಳ್ಳುತ್ತಾರೆಯೇ ?"

"ಸೊಸೆಗೆ ಹುಚ್ಚು ಹಿಡಿಯಿತು, ಮಗನಿಗೆ ಬೇರೆ ಮದುವೆ ಮಾಡಿಸಿದರು ಅಂದುಕೊಳ್ಳುತ್ತಾರೆ."

"ಶೀನು ಯಾವಾಗ ಬರುತ್ತಾನೆ."

"ಕಿಸ್‌ಮಿಸ್ ರಜಕ್ಕೆ ಹೆಂಡತೀನೂ ಕರ್‍ಕೊಂಡು ಬರ್‍ತಾನೆ."

"ಒಳ್ಳೆಯ ಗ್ರಹಚಾರಕ್ಕೆ ತಂದೆಯಲ್ಲಾ."

"ಅನಾಯಾಸ ೪-೫ ಲಕ್ಷ ರೂಪಾಯಿ ಆಸ್ತಿ ಬರೋದನ್ನು ಬಿಟ್ಟು ಬರಲೇಂದ್ರೆ."

"ಇಲ್ಲಾನ್ನು ; ಒಳ್ಳೇ ಕೆಲಸವೇ ಆಯ್ತು. ನರಸಿಂಹಮೂರ್ತಿ, ಸುಶೀ ಲಾಗೆ ಗೊತ್ತೋ ?"

"ಇಲ್ಲ. ಇನ್ನೂ ನಾನು ಹೇಳಿಲ್ಲ."

"ಶೀನೂ ಬರೋ ತನಕ ಬಾಯಿ ಬಿಡಬೇಡ."

"ಇಲ್ಲ. ನಿಮಗೆ ಕೋಪವಿಲ್ಲವಷ್ಟೆ ?"

"ನನ್ನ ಮನೆಗೆ ಸಂಪತ್ತು ಬಂದರೆ ನನಗೆ ಕೋಪವೇ ?"

"ಗೌರೀಗೆ ಮೈಯಲ್ಲಿ ಹೇಗಿದೆ ?"

"ಅವಳಿಗೆ ಏನೋ ಬರಬಾರದು ಬಂದಿದೆ. ಇನ್ನು ಆರು ತಿಂಗಳೋ ಎಂಟು ತಿಂಗಳೋ—ಗೊಟಕ್ ಅಂತಾಳೆ."

"ಅದೂ ಒಳ್ಳೇ ಹುಡುಗಿ ಕಣೇ ಪಾಪ."

"ನಿಮಗೆ ಎಲ್ಲಾರೂ ಒಳ್ಳೆಯವರೇ ಬೆಳ್ಳಗಿರೋದೆಲ್ಲಾ ಹಾಲೂಂತ ಭಾವಿಸುತ್ತೀರಿ. ಅವಳ ಕೃತ್ರಿಮ ನೀವು ಕಾಣಿರಿ. ಪುಣ್ಯಾತ್ಗಿತ್ತಿ ನನ್ನ ಹಂದು ಮುಕ್ಕಿಬಿಟ್ಟಳು."

"ಅಲ್ಲವೇ, ಶೀನೂಗೆ ಮದುವೆಯಾಗಿತ್ತೂಂತ ಹೊಸಪೇಟೆಯಲ್ಲಿ ಗೊತ್ತೇ?"

"ಹ್ಯಾಗೆ ಗೊತ್ತಾಗತ್ತೇಂದ್ರಿ"

"ನಾಳೆ ಆ ಹುಡುಗಿ ಇಲ್ಲಿ ಬಂದು ತಿಳಿದುಕೊಂಡರೆ."

"ಏನುಮಾಡ್ತಾಳೆ. ಶೀನೂನ ಬಿಟ್ಟುಬಿಡುವುದಕ್ಕಾಗುತ್ತದೆಯೇ?"

"ಎಲ್ಲಾ ಬಹಳ ಲೆಕ್ಕಾಚಾರವಾಗಿ ಯೋಚನೆ ಮಾಡಿದ್ದೀ ಕಣೇ"

ಎಂದು ವೆಂಕಟಾಚಲಯ್ಯ ಹೆಂಡತಿಯ ಚಾತುರ್ಯವನ್ನು ಪ್ರಶಂಸಿಸಿದರು.

೧೯

ಮಾವನ ಮನೆಯಲ್ಲಿ ಶೀನು ಭದ್ರವಾಗಿ ಬೇರೂರಿದ. ಹಾಕುವುದಕ್ಕೆ ಬೇಕಾದ ಬಟ್ಟೆಬರೆ, ಊಟಕ್ಕೆ ಬೇಕಾದ ಪಕ್ವಾನ್ನ, ಕೈಯಲ್ಲಿ ಖರ್ಚು ಮಾಡುವುದಕ್ಕೆ ನೂರಾರು ರೂಪಾಯಿ ಕೆಲವು ದಿವಸದಲ್ಲಿಯೇ ತಾಯಿಯ ಖರ್ಚಿಗೆ ೫೦೦ ರೂಪಾಯಿ ಮನಿಯಾರ್ಡರು ಮಾಡಿದ.

ಕಾಮಾಕ್ಷಿ ಸೌಂದರ್ಯ, ಸಂಪತ್ತುಗಳಲ್ಲಿ ಮುಳುಗಿದ್ದರೂ ಅಹಂಕಾರ ಅವಳನ್ನು ಆಹುತಿ ತೆಗೆದುಕೊಂಡಿರಲಿಲ್ಲ. ಅವಳ ಔದಾರ್ಯ ಚಿತ್ತವಾಡಿಗಿಯಲ್ಲಿ ಮನೆಮಾತಾಗಿತ್ತು. ರಾಜಾರಾಯರ ಶಾಲೆಗೆ ೫೦,೦೦೦ ರೂಪಾಯಿಗಳನ್ನು ಗೋಪಾಲಯ್ಯ ಕೊಡಲೊಪ್ಪಿದ್ದುದೂ ಮಗಳ ಪ್ರೇರಣೆಯಿಂದಲೇ.

ಎಲ್ಲರಿಗಿಂತಲೂ ಹೆಚ್ಚಾಗಿ ಕಾಮಾಕ್ಷಿ ಕ್ರಿಸ್‌ಮಸ್ ರಜದ ಬರುವನ್ನು ನಿರೀಕ್ಷಿಸುತ್ತಿದ್ದಳು. ಗಂಡನ ಮನೆಗೆ ಹೋಗಬೇಕು, ಅವನ ಬಂಧುಬಾಂಧವರನ್ನು ನೋಡಬೇಕು ಎಂಬ ಆಸೆ ಅವಳಲ್ಲಿ ಪ್ರಬಲವಾಗಿತ್ತು. ಮನೆಯೆಂದರೆ ಶ್ರೀನಿವಾಸ ಅಂಜುತ್ತಿದ್ದ. ಕಾಮಾಕ್ಷಿ ಮನೆಯವರ ಸುದ್ದಿ ಸಮಾಚಾರ ಕೇಳಿದಾಗ ಶ್ರೀನಿವಾಸನಿಗೆ ಬಹಳ ಹಿಂಸೆಗಿಟ್ಟುಕೊಳ್ಳುತ್ತಿತ್ತು.

ಒಂದುದಿನ ಕಾಮಾಕ್ಷಿ ಹಂಪೆಯತ್ತ ಹೋಗಿಬರಬೇಕೆಂದು ತಂದೆಗೆ ತಿಳಿಸಿದಳು. ಅವರು ಕರೀಗೌಡರ ಕಾರು ತರಿಸಿಕೊಟ್ಟರು. ಹಂಪೆಯಲ್ಲಿ ಕುಳಿತು ತಿನ್ನುವುದಕ್ಕೆ ತಿಂಡಿಯನ್ನೂ, ಥರ್ಮಾಸಿನಲ್ಲಿ ಕಾಫಿಯನ್ನೂ ಹಾಕಿಕೊಟ್ಟರು.

ಹಂಪೆಯಲ್ಲಿ ಒಂದು ತಾಸು ಓಡಿಯಾಡಿ ತುಂಗಭದ್ರಾ ತೀರದಲ್ಲಿ ಬುತ್ತಿ ಬಿಚ್ಚಿಕೊಂಡು ಕಾಮೂ, ಶ್ರೀನಿವಾಸ ಕುಳಿತರು.

"ನಿಮ್ಮ ತಾಯಿಯವರಿಗೆ ಹಂಪೆ ತೋರಿಸಲೇ ಇಲ್ಲವಲ್ಲಾ" ಎಂದಳು ಕಾಮು.

"ತಿರುಗಿ ಬಂದಾಗ ತೋರಿಸಿದರಾಯಿತು."

"ಈ ಸಾರೆ ನಾವು ಬೆಂಗಳೂರಿಗೆ ಹೋಗಿ ಹಿಂದಿರುಗುವಾಗ ಎಲ್ಲರನ್ನೂ ಕರೆದುಕೊಂಡುಬಂದು ಹಂಪೆ ತೋರಿಸಬೇಕು."

"ಯಾಕೆ ನೀವು ಒಂದೊಂದು ಸಲ ಏನೋ ಯೋಚನೆಮಾಡುತ್ತಿರುತ್ತೀರಿ."

"ಇಲ್ಲವಲ್ಲಾ."

"ಸ್ಕೂಲು ಬಿಟ್ಟುಬಿಡಿ. ನಾಳೆ ರಾಜಾರಾಯರು ಬಂದಾಗ ನಾನೇ ಹೇಳಿಬಿಡುತ್ತೇನೆ."

"ಸ್ಕೂಲುಬಿಟ್ಟು ನಾನು ಮನೆಯಲ್ಲಿ ಕುಳಿತೇನು ಮಾಡಲಿ."

"ಮನೆಯಲ್ಲಿ ಹೊತ್ತು ಕಳೆಯುವುದು ಕಷ್ಟವೇ?"

"ಹೂ. ಕಷ್ಟವೇ?"

"ನಾನಿದ್ದರೂ......"

"ಅಲ್ಲ ಕಾಮೂ, ನಾನು ಏನಾದರೂ ವೃತ್ತಿಮಾಡಬೇಡವೇ. ಮನೆಯಲ್ಲಿ ಸುಖವಾಗಿ ಊಟ ಕಳೆದುಹೋಗುತ್ತದೆಂದು ಕುಳಿತರಲೇ?"

"ಏನುಮಾಡಬೇಕೆಂದಿದ್ದೀರಿ."

"ಮುಂದಿನ ಟರ್ಮಿಗೆ ಪುಣೆಗೆ ಹೋಗಿ ಲಾ ಕಾಲೇಜು ಸೇರುತ್ತೇನೆ."

"ನಾನೂ ಬರುತ್ತೇನೆ."

"ಲಾ ಕಾಲೇಜಿಗೆ?"

"ಅಲ್ಲ ಪುಣೆಗೆ."

"ಬಾ. ಅದಕ್ಕೇನು ನಾಲ್ಕು ದಿವಸವಿದ್ದು ಹಿಂದಿರುಗುವೆಯಂತೆ!"

"ಉಹೂ. ನೀವು ಅಲ್ಲಿ ಇರುವತನಕ ನಾನೂ ಇರುತ್ತೇನೆ."

"ಹಾಗಾದರೆ ನನ್ನ ಓದು ಬಹಳ ಚೆನ್ನಾಗಿ ಸಾಗತ್ತೆ."

"ನಿಮ್ಮ ಓದಿಗೆ ನಾನೇನೂ ತೊಂದರೆ ಮಾಡಲ್ಲ."

"ನಿಮ್ಮ ತಂದೆಯನ್ನು ಕೇಳೋಣ. ಅವರು ಹೇಗೆ ಹೇಳಿದರೆ ಹಾಗೆ ಮಾಡೋಣ."

"ಅದೂ ಸರಿಯೇ."

"ನೀನು ಹೇಳಿದ್ದು ನಿಜ ಕಾಮೂ. ನಾನು ಸ್ಕೂಲಿಗೆ ರಾಜೀನಾಮೆ ಕೊಟ್ಟುಬಿಡುತ್ತೇನೆ."

"ಹಾಗಾದರೆ ಬೆಂಗಳೂರಿಗೆ ಈಗಲೇ ಹೊರಡಬಹುದಲ್ಲ."

"ಬೇಡ, ಸ್ವಲ್ಪ ತಡೆದು ಹೋಗೋಣ."

ಕಾಮೂಗೆ ಸ್ವಲ್ಪ ಅಸಮಾಧಾನವೇ ಆಯಿತು. ಆದರೆ ಅದನ್ನು ತೋರಗೊಡಲಿಲ್ಲ.

ಹಂಪೆಯನ್ನು ಬಿಟ್ಟು ಹೊರಡುವಾಗ ಕಾಮು ಪದೇಪದೇ ಹಂಪೆಯನ್ನೂ, ವಿರೂಪಾಕ್ಷದೇವಾಲಯದ ಗೋಪುರವನ್ನೂ ದಿಟ್ಟಿಸಿ ನೋಡಿದಳು.

"ಹಂಪೆಯೆಂದರೆ ನಿನಗಷ್ಟು ಪ್ರೀತಿಯೇ ಕಾಮೂ."

"ಅಣ್ಣಾ ನನ್ನ ಇಲ್ಲಿಗೆ ಪದೇಪದೇ ಕರೆದುಕೊಂಡು ಬಂದು, ಎಲ್ಲಾ ತೋರಿಸಿ ವರ್ಣಿಸುತ್ತಿದ್ದರು. ನನ್ನ ಬಾಲ್ಯದ ಬಹುಭಾಗ ಈ ಹಂಪೆಯಲ್ಲಿ ಕಳೆದಿದ್ದೇನೆ. ಇಲ್ಲಿನ ಪ್ರತಿಯೊಂದು ಕಲ್ಲು, ಗಿಡ, ಮರವೂ ನನಗೆ ಗೊತ್ತು. ಬೆಂಗಳೂರಿಗೆ ಹಂಪೆಯನ್ನು ಜತೆಯಲ್ಲಿ ತೆಗೆದುಕೊಂಡು ಹೋಗಲು ಸಾಧ್ಯವಾಗಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು."

ಅವಳ ಮಾತುಕೇಳಿ ಶ್ರೀನಿವಾಸ ಗಹಗಹಿಸಿ ನಕ್ಕ.

ಕಾಮೂ, ಶ್ರೀನಿವಾಸ ಮನೆಗೆ ಬರುವ ಹೊತ್ತಿಗೆ ಶ್ರೀನಿವಾಸನಿಗೆ ಊರಿನಿಂದ ಕಾಗದ ಬಂದಿತ್ತು. ತಾಯಿ ಬರೆದಿದ್ದರು. ಮನೆಯನ್ನೆಲ್ಲಾ ಸುಣ್ಣಬಣ್ಣ ಮಾಡಿಸುತ್ತಿದ್ದೇನೆ. ಖರ್ಚಿಗೆ ಸ್ವಲ್ಪ ಹಣ ಕಳುಹಿಸು ಎಂದಿತ್ತು. ಕಾಮೂಗೆ ಕಾಗದ ತೋರಿಸಿದ. ಅವಳು ತನ್ನ ಪರ್ಸ್ ತೆಗೆದು ನೂರು ರೂಪಾಯಿಗಳ ಮೂರು ನೋಟುಗಳನ್ನು ಅವನ ಕೈಗಿತ್ತಳು.

ಫಣಿಯಮ್ಮನವರಿಗೆ ಪುರಸತ್ತೇ ಇಲ್ಲ. ಒಂದೇ ಸಮನಾಗಿ ಮನೆ ಕಾಮಗಾರಿಯನ್ನು ಕೈಗೊಂಡಿದ್ದರು. ರಾಮೂ, ಶ್ರೀನಿವಾಸ್ ಇರುವುದಕ್ಕೆ ಮನೆ ಮುಂದಿನ ಸಣ್ಣ ರೂಮು ಒಡಸಿ ದೊಡ್ಡ ರೂಮು ಮಾಡಿಸುತ್ತಿದ್ದರು. ಮನೆಯನ್ನೆಲ್ಲಾ ಶುಚಿಮಾಡಿಸಿ ಹೊಸದಾಗಿ ಸುಣ್ಣಬಣ್ಣ ಮಾಡಿಸುತ್ತಿದ್ದರು.

ಅತ್ತೆಯ ಉದ್ದೇಶ ಸುಶೀಲನಿಗೆ ಸ್ವಲ್ಪವೂ ಅರ್ಥವಾಗಲಿಲ್ಲ. ಗಂಡನನ್ನು ಕೇಳಿದಳು— ಅವನೂ ತಲೆಯಲ್ಲಾಡಿಸಿದ. ಒಂದು ದಿನ ಧೈರ್ಯ ತಂದುಕೊಂಡು ಅತ್ತೆಯನ್ನೇ ಕೇಳಿದಳು :

"ಇದೇನತ್ತೆ— ಮನೆಯನ್ನೆಲ್ಲಾ ಇಷ್ಟು ಪಾಕು ಮಾಡಿಸುತ್ತಿದ್ದೀರಿ."

"ಶೀನು ಬರುತ್ತಾನೆ ಅದಕ್ಕೋಸ್ಕರ."

"ಅವರು ನಾಲ್ಕು ದಿವಸ ರಜಕ್ಕಿದ್ದು ಹೊರಟುಹೋಗುತ್ತಾರೆ. ಅದಕ್ಕಾಗಿ ಇಷ್ಟು ಖರ್ಚುಮಾಡುವುದೇ ?"

"ಅವನೊಬ್ಬನೇ ಬರಲ್ಲ ಕಣೆ. ಹೆಂಡತೀನೂ ಕರ್ಕೊಂಡು ಬರ್ತ್ತಾನೆ."

"ಯಾವ ಹೆಂಡತಿ ?"

"ಯಾವ ಹೆಂಡತಿಯೆಂದರೆ ಮದುವೆಯಾದ ಹೆಂಡತಿ."

"ಇದೇನು ಅತ್ತೆಮ್ಮನವರೇ ವಿಚಿತ್ರವಾಗಿ ಮಾತನಾಡುತ್ತೀರಲ್ಲಾ. ಮದುವೆಯಾದ ಹೆಂಡತಿ ತೌರುಮನೆಯಲ್ಲಿದ್ದಾಳಲ್ಲಾ."

"ತೌರುಮನೆಯಿಂದಲೇ ಬರುತ್ತಾಳೆ. ಬಿಡಿಸಿ ಹೇಳುತ್ತೇನೆ ಕೇಳು ಕಣವ, ಶೀನೂಗೆ ಬೇರೆ ಮದುವೆಯಾಗಿದೆ. ಈಗಿನ ಹೆಂಡತಿ ನಿನ್ನ ಜೋಬದ್ರ ಗೌರಿ ಇದ್ದ ಹಾಗಿಲ್ಲ—ರಂಭೆ ಹಾಗಿದ್ದಾಳೆ."

"ತಮಾಷೆ ಮಾಡುತ್ತೀರಾ ಅತ್ತೆ "

"ಪ್ರಮಾಣವಾಗಿ ನಿಜ ಕಣೇ. ಸ್ವಲ್ಪ ದಿನ ತಾಳು. ನೀನೇ ನೋಡುವೆಯಂತೆ."

ಸುಶೀಲನಿಗೆ ಸಿಡಿಲುಬಡಿದಂತಾಯಿತು.

"ಗೌರಿ ಗತಿ !

"ಗತಿಯೇನು. ಬಿದ್ದಿರುತ್ತಾಳೆ ತೌರುಮನೆಯಲ್ಲಿ."

"ಏನುಮಾಡಿಬಿಟ್ಟಿರಿ ಅತ್ತೇ."

ಎಂದು ಒಳಗೆ ಹೋದಳು. ಅತ್ತೆಯ ದೌರ್ಜನ್ಯ ಇಷ್ಟುದೂರ ಹೋಗುವುದೆಂದು ಸುಶೀಲಾ ಕನಸುಮನಸಿನಲ್ಲಿಯೂ ಎಣಿಸಿರಲಿಲ್ಲ. ಅತ್ತೆ ಸ್ವಲ್ಪ ಏತಕ್ಕೋ ಪಕ್ಕದ ಮನೆಗೆ ಹೋದುದನ್ನು ಕಂಡು, ಮೆಲ್ಲನೆ ಜಾರಿದಳು. ನೇರವಾಗಿ ರಂಗಮ್ಮನವರ ಮನೆಗೆ ಬಂದಳು

ಗೌರಿ ಹಾಸಿಗೆಯ ಮೇಲೆ ಮಲಗಿದ್ದಳು. ಜ್ವರವಿರಲಿಲ್ಲ. ಆದರ ತುಂಬ ನಿಶ್ಶಕ್ತಿ. ಅವಳನ್ನು ಕಂಡಕೂಡಲೆ ಸುಶೀಲಾ ತೂಕತಪ್ಪಿ ಅವಳ ಮೇಲೆ ಬಿದ್ದು

"ಗೌರಿ, ಅತ್ತೆ ನಿನ್ನ ಕೊಂದುಬಿಟ್ಟರಲ್ಲೇ ?"

"ಏನಾಯಿತು ಅಕ್ಕ. ಯಾಕೆ ಹೀಗನ್ನುವಿರಿ."

"ನಿಮ್ಮ ಯಜಮಾನರಿಗೆ ಹೊಸಪೇಟೆಯಲ್ಲಿ ಬೇರೆ ಮದುವೆ ಮಾಡಿಸಿ ಬಂದಿದ್ದಾರೆ. ದಂಪತಿಗಳು ಬರುವುದಕ್ಕೆ ಮನೆ ಸಜ್ಜುಗೊಳಿಸುತ್ತಿದ್ದಾರೆ."

ರಂಗಮ್ಮನವರು ಹಣೆಹಣೆ ಚಚ್ಚಿಕೊಂಡರು. ಗೌರಿ ಗಂಭೀರವಾದಳು. ಅವಳ ಕಣ್ಣಿಂದ ನೀರು ಬರಲಿಲ್ಲ.

"ಅಕ್ಕ."

"ಏನು ಗೌರಿ."

"ನನಗೆ ಅವರು ಇಷ್ಟು ದಿವಸ ಕಾಗದ ಬರೆಯದಿದ್ದುದಕ್ಕೆ ಕಾರಣ ಈಗ ತಿಳಿದ ಹಾಗಾಯಿತು."

"ಇಂಥ ಅನ್ಯಾಯ ಉಂಟೇಮ್ಮ."

"ಅಕ್ಕ, ಅವರು ಇನ್ನೊಂದು ಮದುವೆಯಾದರೇನಂತೆ. ನಾನು ಅವ ರಿಬ್ಬರ ಸೇವೆಮಾಡಿಕೊಂಡಿರುತ್ತೇನೆ. ಅವರ ಮನೆಗೆ ಒಬ್ಬಳು ಕೆಲಸದವಳು ಬೇಡವೇ?"

"ಬೇಡ ಗೌರಿ. ನೀನು ಹೀಗೆ ಮಾತನಾಡಬೇಡ. ಕಣ್ಣುತುಂಬ ಅತ್ತು ಬಿಡು. ನೋಡಿ ಸಮಾಧಾನಪಟ್ಟುಕೊಳ್ಳುತ್ತೇನೆ."

"ಅಕ್ಕ—ಅವರು ಊರಿಗೆ ಬಂದ ಮೇಲೆ ಇಬ್ಬರನ್ನೂ ಇಲ್ಲಿಗೆ ಒಂದು ದಿವಸ ಕರೆದುಕೊಂಡು ಬರುತ್ತೀರಾ ನಾನು ತೊಂದರೆ ಮಾಡಲ್ಲ ಸುಶೀಲಕ್ಕ. ದೂರದಿಂದಲೇ ನೋಡಿ ನನ್ನ ಸ್ವಾಮಿಗೆ ಕೈಮುಗಿಯುತ್ತೇನೆ. ದಾಸಿ ಏನಾ ದರೂ ಅಪರಾಧಮಾಡಿದ್ದರೆ ಕ್ಷಮಿಸಿ ಎಂದು ಬೇಡಿಕೊಳ್ಳುತ್ತೇನೆ. ಆ ನನ್ನ

ಹೊಸ ಅಕ್ಕನಿಗೆ 'ಅವರನ್ನು ಸಂತೋಷವಾಗಿರಿಸುವುದು ನನಗೆ ಸಾಧ್ಯವಾಗ ಲಿಲ್ಲ. ನೀವು ಅವರನ್ನು ಚೆನ್ನಾಗಿ ನೋಡಿಕೊಳ್ಳಿ' ಎಂದು ಬೇಡಿಕೊಳ್ಳು ತ್ತೇನೆ. ನಿಜವಾಗಿಯೂ ನನಗೆ ಹೊಟ್ಟೆಕಿಚ್ಚಿಲ್ಲ ಅಕ್ಕ. ನನ್ನ ಸ್ವಾಮಿ ಚೆನ್ನಾಗಿದ್ದರೆ ಸಾಕು. ದೇವರು ಅವರಿಗೆ ತುಂಬ ಆಯಸ್ಸು ಕೊಡಲಿ.''

ಗೌರಿ ಸೋತಳು. ಸ್ಮೃತಿ ತಪ್ಪಿಹೋಯಿತು. ಅವಳನ್ನು ಉಪಚರಿಸಿ ಅವಳು ಕಣ್ಣು ತೆರೆಯುದನ್ನು ನೋಡಿ ಸುಶೀಲಾ ಮನೆಗೆ ಹಿಂದಿರುಗಿದಳು.

ಅತ್ತೇ ಬಾಗಿಲಿನಲ್ಲೇ ಸುಶೀಲನಿಗೆ ಕಾಯುತ್ತಿದ್ದರು.

"ಎಲ್ಲೀಗೆ ಹೋಗಿದ್ದೆಯೇ?"

"ಗೌರಿನ್ನ ನೋಡಿಕೊಂಡು ಬರುವುದಕ್ಕೆ."

"ಅಲ್ಲಿ ಬಿತ್ತಿಬಂದೆಯೋ ಇಲ್ಲವೋ!"

"ಹೌದು. ಹೇಳಿ ಬಂದೆ."

"ಅವಳ ಜತೆಗೆ ನಿನ್ನೂ ಸಾಗಿಸಬೇಕಾಗಿತ್ತು."

"ಅದೆಲ್ಲಾ ಸಾಧ್ಯವಿಲ್ಲದ ಮಾತು ಅತ್ತೇ—ಸುಮ್ಮನೆ ತೊಂದರೆ ತೆಗೆದು ಕೊಳ್ಳಬೇಡಿ."

ಎಂದು ಹೇಳಿ ಒಳಗೆ ಬಂದಳು. ನರಸಿಂಹಮೂರ್ತಿ ಮನೆಗೆ ಬಂದ ಕೂಡಲೆ ಆವನಿಗೂ ಈ ಸುದ್ದಿ ಮುಟ್ಟಿಸಿದಳು.

"ಕಾರ್ಯ ಮಿಂಚಿಹೋಯಿತು."

"ಹೋಯಿತು ಸರಿ ನಾಳೆ ಗೌರೀಗೇನಾದರೂ ಹೆಚ್ಚುಕಡಿಮೆ ಯಾದರೆ ಅದರ ಜವಾಬ್ದಾರಿ ಅತ್ತೆಮ್ಮನವರದು."

"ಗೌರಿ ಹೇಗಿದ್ದಾಳೆಯೇ ಈಗ."

"ನೀವೇ ಹೋಗಿ ನೋಡಿಕೊಂಡು ಬನ್ನಿ."

''ಯಾವ ಮುಖ ಹೊತ್ತುಕೊಂಡು ಅವಳನ್ನು ನೋಡುವುದಕ್ಕೆ ಹೋಗಲಿ ಹೇಳು........ನನ್ನ ಏನು ಮಾಡೂಂತಿ ಸುಶೀಲಾ.''

''ನನಗೆ ಬುದ್ಧಿ ಓಡಿದರಲ್ಲವೇ ನಿಮಗೆ ಹೇಳುವುದಕ್ಕೆ.''

''ಎಂಥ ಕೆಲಸಮಾಡಿಬಿಟ್ಟಳು ಅಮ್ಮ.''

''ಪ್ರಪಂಚದಲ್ಲಿ ಧರ್ಮ, ಕರ್ಮ ಒಂದೂ ಉಳಿದಿಲ್ಲಾಂದ್ರೆ........ ದುಡ್ಡೊಂದಿದ್ದು ಬಿಟ್ಟರೆ ಆಯಿತು ಆ ಹುಡುಗಿ ಗೌರನ್ನ ಗೋಳು ಹುಯ್ದು

ಕೊಂಡು ಗೊಟರೆಯಲ್ಲಿಕ್ಕಿದರು. ಈಗ ಈ ಹುಡುಗಿ ಕಾಳೀಂತ ಕಾಣತ್ತೆ. ಇದರಿಂದ ಒಳ್ಳೆಯದಾಗಲ್ಲ."

"ಅಮ್ಮನ ಮೇಲೆ ನಿನಗೆ ಒಳ್ಳೆಯ ಹಿಡಿತ ಸಿಕ್ಕಿತಲ್ಲವೇ?"

"ನಿಮ್ಮ ತಾಯೀಂತ್ಲ ನೀವೇ ಹೊಗಳಿಕೊಳ್ಳಬೇಕು ನೋಡಿ."

"ಸುಶೀಲಾ, ಬಾಯಿ ಹಗುರಮಾಡಬೇಡ. ಅಮ್ಮನ್ನ ನನ್ನ ಮುಂಗೆ ನೀನು ಹೀಯಾಳಿಸಿದರೆ ಕೇಳಿಕೊಂಡು ನಾನು ಸುಮ್ಮನಿರುವುದಿಲ್ಲ."

"ಈ ದರ್ಪ ಸ್ವಲ್ಪ ನಿಮ್ಮ ತಾಯಿಯ ಮುಂದೆ ತೋರಿಸಿ. ನಿಮ್ಮ ಆರ್ಭಟಕ್ಕೆಲ್ಲಾ ಬಡಪಾಯಿಗಳು ನಾವು ಸಿಕ್ಕಿದ್ದೀವಿ."

"ಇದೇನೇ ಸುಶೀಲಾ, ಒಂದು ದಿನ ಹೀಗೆ ಮಾತನಾಡಿದವಳಲ್ಲ ನೀನು. ನಿನಗೇನೇ ಬಂತು?"

"ವಿವೇಕ ಬಂತು--ಗೌರನ್ನ ನೋಡಿಬನ್ನಿ. ನಿಮಗೂ ವಿವೇಕ ಬಂದೀತು."

"ಸಾಕು ಸುಮ್ಮನಿರು ಮಹಾರಾಯ್ತಿ—ತೋಳ ಹಳ್ಳಕ್ಕೆ ಬಿತ್ತೂಂದರೆ ಆಳಿಗೊಂದು ಕಲ್ಲು ಅನ್ನುವ ಹಾಗೆ ಮಾಡಬೇಡ."

"ನನಗೇಕೆ ಬೇಕು ಹೇಳಿ. ಮಾಡಿದ್ದುಣ್ಣೋ ಮಾರಾಯ"

ಎಂದಳು. ಅವಳ ಅಂತಃಕರಣ ಕಲಕಿಹೋಗಿತ್ತು. ಸುಶೀಲನ ಆವೇಶ ನೋಡಿ ಅವಳನ್ನು ಮಾತನಾಡಿಸುವ ಧೈರ್ಯ ಕೂಡ ಫಣಿಯಮ್ಮ ನವರಿಗಾಗಲಿಲ್ಲ

೨೦

ಗೋಪಾಲಯ್ಯ ಮಗಳು ಅಳಿಯನಿಗೆ ಬೇಕಾದುದನ್ನಿತ್ತು ಬೀಳ್ಕೊಟ್ಟರು. ಅವಳ ಬಟ್ಟೆಬರೆ, ಪಾತ್ರೆಪದಾರ್ಥ, ಒಡವೆಗಳ ಪೆಟ್ಟಿಗೆಯೇ ಒಂದು ಗಾಡಿ ಸಾಮಾನಾಯಿತು. ಇಂದಿರಮ್ಮ ಬೆಂಗಳೂರು ತನಕ ಬಂದು ಮಗಳನ್ನು ಕಳುಹಿಸಿಬರಬೇಕೆಂದುಕೊಂಡಿದ್ದರು. ಶ್ರೀನಿವಾಸ ಈ ಸಂಗತಿಗೆ ಸಾಕಷ್ಟು ಪ್ರೋತ್ಸಾಹ ಕೊಡಲಿಲ್ಲ.

ಫಣಿಯಮ್ಮ ಮಗನಿಗೆ ಬೇರೆ ಹೆಂಡತಿ ತಂದಿರುವ ವಿಷಯ ಕಾಡ್ಗಿಚ್ಚಿನಂತೆ ಹಬ್ಬಿತು. ಕಾಮಾಕ್ಷಿ ಬರುವ ದಿನ ಮನೆಯಲ್ಲಿ ಒಂದು ಜಾತ್ರೆಯೇ

ಸೇರಿತು. ಫಣಿಯಮ್ಮ ಸೊಸೆಗೆ ಆರತಿ ಬೆಳಗಿಸಿ, ಈಡುಗಾಯಿ ಹಾಕಿ ಒಳಕ್ಕೆ ಕರೆದೊಯ್ದರು.

ಸುಶೀಲನ ಪರಿಚಯಮಾಡಿಕೊಟ್ಟರು. ಅವಳು ಸರಿಯಾಗಿ ಮುಖ ಕೊಟ್ಟು ಮಾತನಾಡದಿದ್ದುದನ್ನು ಕಂಡು ಕಾಮಾಕ್ಷಿ ಅವಳು ಸ್ನೇಹಜೀವಿಯಲ್ಲ ಎಂದುಕೊಂಡಳು.

ಶ್ರೀನಿವಾಸ ತನ್ನ ರೂಮು ನೋಡಿ ವಿಸ್ಮಯಗೊಂಡ. ತಾಯಿ ತನಗಾಗಿ ಕಾಮಾಕ್ಷಿಗಾಗಿ ಎಷ್ಟು ಕಷ್ಟಪಟ್ಟಿದ್ದಾರೆಂದುಕೊಂಡ.

ಕಾಮಾಕ್ಷಿ ಎಷ್ಟು ಮಾತನಾಡಿಸಿಕೊಂಡು ಹೋದರೂ ಇಲ್ಲದ ಕೆಲಸದ ನೆಪಮಾಡಿಕೊಂಡು ಸುಶೀಲ ತಪ್ಪಿಸಿಕೊಳ್ಳುತ್ತಿದ್ದಳು. ಅವಳಿಗಂತೂ ಫಣಿಯಮ್ಮನ ಆರೈಕೆ, ಉಪನ್ಯಾಸ ಕೇಳಿಕೇಳಿ ಸಾಕಾಗಿತ್ತು. ಸಮವಯಸ್ಸಿನ ಜೀವದ ಸ್ನೇಹ ಬಯಸುತ್ತಿತ್ತು ಕಾಮಾಕ್ಷಿಯ ಅಂತಃಕರಣ.

ಸುಶೀಲ ಅಡಿಗೆಯ ಮನೆಯಲ್ಲಿದ್ದಾಗ ಅವಳಿಗೆ ನೆರವಾಗಲು ಕಾಮಾಕ್ಷಿ ಒಳಗೆ ಹೋದಳು. ತರಕಾರಿ ಹೆಚ್ಚಿಕೊಡುವುದಕ್ಕೆ ಈಳಿಗೆಮಣೆ ಎಳೆದುಕೊಂಡಾಗ ಸಟಕ್ಕನೆ ಸುಶೀಲಾ

"ಬೇಡಮ್ಮ—ನೀನು ಹೆಚ್ಚಬೇಡ. ಅತ್ತೆ ಕಂಡರೆ ಕೋಪಿಸಿಕೊಳ್ಳುತ್ತಾರೆ."

"ಏಕೆ, ಈ ಮನೆ ಕೆಲಸಮಾಡುವುದು ನನ್ನ ಕರ್ತವ್ಯವಲ್ಲವೇ?"

"ನೀನು ದೊಡ್ಡವರ ಮಗಳಮ್ಮ—ಆಳು ಇಟ್ಟು ಕೆಲಸಮಾಡಿಸಿಕೊಳ್ಳಬಲ್ಲೆ."

"ಸುಶೀಲಮ್ಮ ನನ್ನ ತಂದೆ ಶ್ರೀಮಂತರಾಗಿರುವುದು ನನ್ನ ತಪ್ಪೇ?"

"ಯಾರಂತಾರಮ್ಮ ಹಾಗೆ. ನಾವು ಬಡವರಾಗಿರುವುದು ನಮ್ಮ ತಪ್ಪು."

"ಸುಶೀಲಮ್ಮ, ನಾನು ಪ್ರಪಂಚ ಕಂಡವಳಲ್ಲ. ನನಗೆ ಯಾರ ಹತ್ತಿರ ಹೇಗೆ ನಡೆದುಕೊಳ್ಳಬೇಕೆಂಬುದು ಗೊತ್ತಿಲ್ಲ. ನಾನೇನು ತಪ್ಪುಮಾಡಿದೆನೆಂದು ನೀವಿಷ್ಟು ಕೋಪಮಾಡಿಕೊಳ್ಳುತ್ತೀರಿ."

ಕಾಮಾಕ್ಷಿ ಮಾತು ಸುಶೀಲನ ಕರುಳುಮುಟ್ಟಿತು.

" ಇದು ನಾನು ಭಾವಿಸಿದ ಹುಡುಗಿಯಲ್ಲ. ಶ್ರೀಮಂತರ ಮಗಳಾದರೂ ಜಂಭವಿಲ್ಲ "ಎಂದುಕೊಂಡಳು.

" ತರಕಾರಿ ಹೆಚ್ಚಿಕೊಡು ಕಾಮಾಕ್ಷಿ."

ಕಾಮಾಕ್ಷಿಗೆ ಅತ್ಯಾನಂದವಾಯಿತು. ಹೀರೇಕಾಯಿ ಹೆಚ್ಚುತ್ತಾ

" ಸುಶೀಲಮ್ಮ, ನಮ್ಮ ಮನೆಯಲ್ಲಿ—ಅಂದರೆ ತೌರುಮನೆಯಲ್ಲಿ ಆಳು ಕಾಳು ಇದ್ದಾರೆ. ಅಡಿಗೆಯವನೂ ಇದ್ದಾನೆ. ಆದರೆ ನಮ್ಮ ತಾಯಿ ನಮ್ಮ ಕೈಲೇ ಕೆಲಸಮಾಡಿಸುತ್ತಿದ್ದರು. ಅಡಿಗೆಯನ್ನೂ ಮಾಡಿಸುತ್ತಿದ್ದರು. ತಂದೆ ಕೋಪಮಾಡಿಕೊಂಡರೆ ' ನಾಳೆ ಕ ಮು ಯಾರ ಕೈ ಹಿಡಿಯುತ್ತಾಳೆಯೋ, ಎಲ್ಲಾ ಕಲಿತಿರಬೇಕೂಂದ್ರೆ. ಹೆಣ್ಣು ದಂತದ ಗೊಂಬೆ ಹಾಗಿರಬಾರದು. ಕಷ್ಟ ಕಂಡಿರಬೇಕು ' ಎಂದು ಸಮಾಧಾನ ಹೇಳುತ್ತಿದ್ದರು. ರಾತ್ರೀಗೆ ನಾನೇ ಅಡಿಗೆ ಮಾಡುತ್ತೇನೆ ಸುಶೀಲಮ್ಮ— ನೀವು ವಿಶ್ರಮಿಸಿಕೊಳ್ಳಿ."

ಸುಶೀಲ ಕಾಮಾಕ್ಷಿಯನ್ನೊಮ್ಮೆ ನೋಡಿದಳು ಆ ನೋಟದಲ್ಲಿ ಕಾಠಿಣ್ಯವಿರಲಿಲ್ಲ, ಕಾರುಣ್ಯವಿತ್ತು, ಮಾರ್ದವವಿತ್ತು.

ಸುಶೀಲನ ಹೃದಯ ಗೆಲ್ಲುವುದು ಕಾಮಾಕ್ಷಿಗೆ ದೊಡ್ಡ ಕೆಲಸವಾಗಲಿಲ್ಲ. ನಾಲ್ಕಾರು ದಿವಸಗಳಲ್ಲಿ ಅವರು ಗೆಳತಿಯರಾದರು.

" ಸುಶೀಲಕ್ಕ....ಹಾಗೆ ಕರೆಯಬಹುದೇ ? '

" ಕರೆ ಕಾಮೂ."

" ನನ್ನ ಮೇಲೆ ಮೊದಲು ನೀವೇಕೆ ಅಷ್ಟು ಅಸಮಾಧಾನಮಾಡಿ ಕೊಂಡಿದ್ದಿರಿ."

" ಕಾರಣವಿದೆ ಕಾಮೂ. ಒಂದು ದಿನ ಹೇಳುತ್ತೇನೆ."

" ಈಗಲೇ ಹೇಳಿ ಅಕ್ಕ."

" ಅತ್ತೆ ಹೊಂಚು ಕೇಳುತ್ತಿದ್ದಾರೇನು ನೋಡಿ ಬಾ."

ಕಾಮು ನೋಡಿ ' ಇಲ್ಲ ' ಎಂದಳು.

" ಈ ಮದುವೆಗೆ ನೀನು ಹೇಗೆ ಒಪ್ಪಿದೆ ? "

" ಯಾಕೆ ? ಅದರಲ್ಲಿ ನನ್ನ ತಪ್ಪೇನು ? "

" ತಪ್ಪೇನೂ ಇಲ್ಲ. ನನ್ನ ಮೈದುನನಿಗೆ ಈ ಮೊದಲೇ ಮದುವೆ ಯಾಗಿದೆ."

" ಹೆಂಡತಿ........"

" ಜೀವಂತಳಾಗಿದ್ದಾಳೆ."

" ಹಾ ! "

" ಏಕೆ ಹಾ ಎನ್ನುತ್ತೀ. ಈ ವಿಷಯ ನಿನಗೆ ಗೊತ್ತಿರಲಿಲ್ಲವೇ ? "

" ದೇವರಾಣೆಗೂ ಗೊತ್ತಿರಲಿಲ್ಲ ಸುಶೀಲಕ್ಕ."

" ಅವಳೂ ನಿನ್ನ ಹಾಗೆ ಒಳ್ಳೆಯ ಹುಡುಗಿ. ಒಂದು ಪಾಪ ಕಂಡವಳಲ್ಲ. ಅವಳನ್ನು ಕಸಕ್ಕಿಂತ ಕಡೆಮಾಡಿ ಆಚೆಗೆ ನೂಕಿದ್ದಾರೆ."

" ಈಗ ಅವಳೆಲ್ಲಿದ್ದಾಳೆ."

" ಇದೇ ಊರಿನಲ್ಲಿ—ತೌರುಮನೆಯಲ್ಲಿ."

" ಅತ್ತೆ ನನಗೆ ಮೋಸ ಮಾಡಿದರು."

" ಅವರು ಮಾಡಿರೋ ಅಪರಾಧಗಳಲ್ಲಿ ಇದು ಬಹಳ ಸಣ್ಣದು ಕೇಳು........"

ಎಂದು ಗೌರಿ ಕಥೆಯನ್ನೆಲ್ಲಾ ಕೂಲಂಕಷವಾಗಿ ವರ್ಣಿಸಿದಳು. ಕಾಮಾಕ್ಷಿ ಕಣ್ಣಲ್ಲಿ ಕೋಡಿ ಹರಿಯಿತು.

" ಅಕ್ಕಾ ನಿಮ್ಮನ್ನು ಆಕ್ಷೇಪಿಸಿದ್ದಕ್ಕೆ ಕ್ಷಮಿಸಿ. ನನಗೊಂದು ಉಪಕಾರ ಮಾಡುವಿರಾ ? "

" ಹೇಳು."

" ಆ ಹುಡುಗಿಯನ್ನು ನನಗೊಮ್ಮೆ ತೋರಿಸಿ."

"ಈಗ ಬೇಡ ಸಮಯ ಬಂದರೆ ನಾನೇ ಕರೆದುಕೊಂಡು ಹೋಗುತ್ತೇನೆ."

" ನಾನು ಮಹಾಪಾಪಿ ಅಕ್ಕ."

" ಅಲ್ಲ ತಾಯಿ. ನಿನ್ನದೇನು ತಪ್ಪು ಇದರಲ್ಲಿ."

ಎಂದು ಕಾಮಾಕ್ಷಿಯನ್ನು ಸಮಾಧಾನ ಮಾಡಿದಳು.

ಸುಶೀಲ ಶ್ರೀನಿವಾಸನ ಎರಡನೆಯ ಮದುವೆಯ ವಿಷಯ ತಿಳಿಸಿದಂದಿನಿಂದ ಗೌರಿ ಪ್ರಕೃತಿ ತೀರಾ ಕೆಟ್ಟಿತು. ಡಾಕ್ಟರು ' ಹಿಸ್ಟೀರಿಯಾ ' ಎಂದರು. ಏನು ಮಾಡಿದರೂ. ಊಟ ಮಾಡುತ್ತಿರಲಿಲ್ಲ. ಒಂದು ತೊಟ್ಟು ಹಾಲು ಕುಡಿಯುತ್ತಿರಲಿಲ್ಲ.

ಸ್ನಾನಕ್ಕೆ ಹೊರಟರೆ ಬೆಳಿಗ್ಗೆಯಿಂದ ಸಂಜೆಯವರೆಗೆ ನೀರು ಸೇದಿ ಸೇದಿ ಹುಯ್ದುಕೊಳ್ಳುತ್ತಿದ್ದಳು. ಪೂಜೆಗೆ ಕುಳಿತರೂ ಹಾಗೆ. ಎಷ್ಟು ಹೂವು, ಕರ್ಪೂರ, ಗಂಧದ ಕಡ್ಡಿಯಾದರೂ ಸಾಲದು.

ಒಮ್ಮೊಮ್ಮೆ ಮೈ ಜುಮ್ಮೆನಿಸುವಂತೆ ನಗುತ್ತಿದ್ದಳು. ಅಳುವುದಕ್ಕೆ ಮೊದಲಿಟ್ಟರೆ ಅದಕ್ಕೂ ಕೊನೆಮೊದಲಿಲ್ಲ. ಆದರೆ ಅವಳಿಂದ ಯಾರಿಗೂ ಭಾಧಕವಾಗಿರಲಿಲ್ಲ.

ಒಂದುದಿನ ಗೌರಿ ಸ್ನಾನಕ್ಕೆ ನಿಂತಿದ್ದಳು. ಇಪ್ಪತ್ತು ಬಿಂದಿಗೆ ನೀರು ಹುಯ್ದುಕೊಂಡ ಮೇಲೆ ಭಾವಿಯ ಕಟ್ಟೆಯ ಮೇಲೆ ನಿಂತಳು. ಅದನ್ನು ಅಡಿಗೆಮನೆಯಿಂದ ಕಂಡ ರಂಗಮ್ಮ ಹೌಹಾರಿ ಬಂದು ಅವಳನ್ನು ಕೆಳಗೆಳೆದರು. ಅಂದಿನಿಂದ ಒಂದು ಗಳಿಗೆ ಗೌರಿ ಒಬ್ಬಳೇ ಇರಲು ರಂಗಮ್ಮ ಬಿಡುತ್ತಿರಲಿಲ್ಲ.

ಕೆಲವು ದಿವಸ ರೋಗ ಉಲ್ಬಣವಾಗುತ್ತಿತ್ತು. ಆಗ ತಲೆ ಬಿರಿಹುಯ್ದು ಕೊಂಡು, ಕೈಗೆ ಸಿಕ್ಕಿದುದನ್ನು ತೆಗೆದುಕೊಂಡು ತಲೆಗೆ ಹೊಡೆದುಕೊಳ್ಳುತ್ತಿದ್ದಳು. 'ಗಂಡ' ಶಬ್ದ ಕಿವಿಯ ಮೇಲೆ ಬಿದ್ದರೆ ಗೌರಿ ಇದ್ದಕ್ಕಿದಂತೆ ಪ್ರಶಾಂತಳಾಗುತ್ತಿದ್ದಳು. ಮರುಕ್ಷಣವೇ ರೋಗ ಮತ್ತಷ್ಟು ಪ್ರಕೋಪಕ್ಕೇರುತಿತ್ತು.

ಗೌರಿಸಿಗೆ ಹುಚ್ಚು ಹಿಡಿದಿದೆ ಎನ್ನುವುದೇ ಕಷ್ಟಕ್ಕೆ ಬರುತ್ತಿತ್ತು. ಒಂದೊಂದುದಿನ ಎಲ್ಲರಹಾಗೆ ಊಟಮಾಡಿ, ಸುಖವಾಗಿ ಮಾತಾಡಿಕೊಂಡಿದ್ದು ನಿದ್ರಿಸುತ್ತಿದ್ದಳು. ಆ ದಿನಗಳಲ್ಲಿ ಅವಳು ಕೇಳುತ್ತಿದ್ದುದೊಂದೇ ಪ್ರಶ್ನೆ

"ಅವರು ಊರಿಗೆ ಬಂದರೂ? ಇಲ್ಲಿಗೆ ಯಾವಾಗ ಬರುತ್ತಾರೆ."

ಸಲಸಲಕ್ಕೂ ಸುಳ್ಳು ಜೋಡಿಸಿ ಜೋಡಿಸಿ ರಂಗಮ್ಮ ಬೇಸತ್ತಿದ್ದರು.

ಮದುವೆ ಸಂದರ್ಭದಲ್ಲಿ ಗಿರಿಯಪ್ಪನವರಿಗೂ ವೆಂಕಟಾಚಲಯ್ಯನವರಿಗೂ ಮನಸ್ತಾಪ ಹುಟ್ಟಿದುದರಿಂದ ಅವರು ವೆಂಕಟಾಚಲಯ್ಯನವರ ಮನೆಗೆ ಕಾಲಿಡುತ್ತಿರಲಿಲ್ಲ. ಸುಬ್ಬರಾಯರ ಸಹಾಯಕ್ಕೆ ನಿಲ್ಲುವವರು ಯಾರೂ ಇರಲಿಲ್ಲ. ಸುಬ್ಬರಾಯರು, ರಂಗಮ್ಮ ಮಗಳ ಸ್ಥಿತಿ ನೋಡಿ ನೋಡಿ ಹುಚ್ಚರಂತಾಗಿದ್ದರು.

ರಂಗಮ್ಮ ಗೌರಿಯ ಪಕ್ಕದಲ್ಲಿ ಕುಳಿತುಕೊಂಡು ಸವಿಮಾತುಗಳನ್ನಾಡುತ್ತ ಅವಳಿಗೆ ಊಟ ಮಾಡಿಸಲೆತ್ನಿಸುತ್ತಿದ್ದಳು. ಸುಶೀಲ, ಕಾಮಾಕ್ಷಿ, ಆ ಹೊತ್ತಿಗೆ ಸರಿಯಾಗಿ ಒಳಬಂದರು.

"ಬನ್ನಿ ಸುಶೀಲಮ್ಮ, ಮಂಗಲೆ ಎಳೆದುಕೊಂಡು ಕುಳಿತುಕೊಳ್ಳಿ ಇವರು ಯಾರೋ ಗೊತ್ತಾಗಲಿಲ್ಲವಲ್ಲಾ."

"ಇವರೇ......ನಾನು ಹೇಳಿದ್ದೆನಲ್ಲಾ ಕಾಮಾಕ್ಷಮ್ಮ."

ತಮ್ಮ ಹೊಟ್ಟೆಯಲ್ಲಿದ್ದ ಬೆಂಕಿಯನ್ನು ಅಡಗಿಸಿಕೊಂಡು ರಂಗಮ್ಮ

"ಬಾಮ್ಮ ಕೂತುಕೋ. ಬಡವರ ಮನೆಗೆ ಭಾಗ್ಯಲಕ್ಷ್ಮಿ ಬಂದಹಾಗೆ ಬಂದೆ" ಎಂದು ಉಪಚರಿಸಿದರು.

ಕಾಮಾಕ್ಷಿ ಶಿಲಾವಿಗ್ರಹದಂತೆ ಕುಳಿತು ಗೌರಿಯ ಚರ್ಯೆಗಳನ್ನು ನೋಡಲಾರಂಭಿಸಿದಳು. ಗೌರಿ ಊಟದ ಶಾಸ್ತ್ರ ಮುಗಿಯುತ್ತಲು

"ರಂಗಮ್ಮನವರೇ, ಗೌರಮ್ಮನನ್ನು ನಾನು ಮಾತನಾಡಿಸಲೇ ?"

"ಮಾತನಾಡಿಸಮ್ಮ ಅವಳು ಮನಸ್ಸು ಬಂದರೆ ಉತ್ತರ ಕೊಡುತ್ತಾಳೆ. ಇಲ್ಲವಾದರೆ ಸುಮ್ಮನಿರುತ್ತಾಳೆ."

"ಅವರು ಏನು ಮಾಡಿದರೂ ನನಗೆ ಅಸಮಾಧಾನವಿಲ್ಲ."

"ಗೌರೀ........" ಎಂದಳು ಸುಶೀಲಮ್ಮ.

ಗೌರಿ ಕಣ್ಣುಬಿಟ್ಟು ನೋಡಿ ಸುಶೀಲನನ್ನು ಗುರುತಿಸಿ

"ನೀನೇ ಅಕ್ಕ........"

"ಹೌದು ಗೌರಿ........ನಾನೇ........"

"ನನ್ನ ಮನೆಗೆ ಕರೆದುಕೊಂಡು ಹೋಗುವುದಕ್ಕೆ ಬಂದಿರಾ?........ ಯಜಮಾನರು ಊರಿಗೆ ಬಂದರೇ ?"

"ಬಂದರಮ್ಮ" ಎಂದಳು ಕಾಮಾಕ್ಷಿ.

"ನೀವು ಯಾರು ?"

"ನಾನು........ಕಾಮಾಕ್ಷಿ........ನಿಮ್ಮ ಯಜಮಾನರ ಎರಡನೆಯ ಹೆಂಡತಿ."

"ನೀವೇನೇ........"

ಎಂದು ಗೌರಿ ಎದ್ದು ದೇವರ ಮನೆಯಲ್ಲಿದ್ದ ಹೂವನ್ನು ಒಂದು ಬೊಗಸೆ ತಂದು ಅವಳ ತಲೆಮೇಲೆ ಹಾಕಿ ಸಾಷ್ಟಾಂಗ ನಮಸ್ಕಾರ ಮಾಡಿದಳು.

"ಅಕ್ಕಾ......" ಎಂದಳು ಗೌರಿ.

"ಅಕ್ಕ ಅಲ್ಲಮ್ಮ........ತಂಗಿ. ನೀವು ಅಕ್ಕ. ......ನಾನು ತಂಗಿ."

"ಹೌದು ತಂಗಿ, ಹಾಗಾದರೆ ನಾನು ಏಕವಚನದಲ್ಲಿ ಮಾತನಾಡಿಸ ಬಹುದು."

"ಏಕವಚನದಲ್ಲಿಯೇ ಮಾತನಾಡಿಸಬೇಕು."

"ಕಾಮಾಕ್ಷಮ್ಮ ನೀನು ಪುಣ್ಯವಂತೆ"

"ನಿಮ್ಮ ಆಶೀರ್ವಾದ. ಏಕೆ ಹಾಗನ್ನುವಿರಿ ?"

"ನನ್ನ ಯಜಮಾನರ ಸೇವೆಮಾಡೋ ಪುಣ್ಯ ನನಗೆ ಸಿಕ್ಕದೆ."

"ನಿಮಗೂ ಸಿಕ್ಕುತ್ತೆ— ಏಕೆ ಯೋಚನೆ ಮಾಡುತ್ತೀರಿ."

"ಇಲ್ಲಮ್ಮ— ನಾನು — ಪಾಪಿ — ಪಾಪಿ— ಪಾಪಿ—"

"ಅಕ್ಕಾ— ನನ್ನ ಮೇಲೆ ಕೋಪವೇ ?"

"ಕೋಪವೇಕಮ್ಮ. ಅಂಥ ಗಂಡನ್ನ ಬಾಳಿಸಲಿಲ್ಲವಲ್ಲಾ ಎಂದು ನನ್ನ ಮೇಲೇ ನನಗೆ ಕೋಪ."

"ನೀವೇಕೆ ಸರಿಯಾಗಿ ಊಟವು ಡಲ್ಲ."

"ಈಗ ಕಾನೆ ಮಾಡಿದೆನಲ್ಲ."

"ನೋಡಿ ಎಷ್ಟು ಕೃಶವಾಗಿ ಹೋಗಿದ್ದೀರಿ. ನಾಳೆ ಯಜಮಾನರು ನೋಡಿದರೆ ಏನಂದುಕೊಳ್ಳುತ್ತಾರೆ."

"ಹೌದು ತಂಗಿ. ಮರೆತಿದ್ದೆ. ನಾನು ಅವರ ಮನಸ್ಸ ನೋಯಿಸ ಬಾರದು. ಅಮ್ಮಾ, ರಾತ್ರೀಗೆ ನನಗೆ ತುಂಬ ಬಾದಾಮಿಹಾಲು ಕೊಡು."

"ಆಗಲಿ ಗೌರಾ" ಎಂದರು ರಂಗಮ್ಮ.

"ನಿಮಗೆ ಗುಣವಾದ ಮೇಲೆ ನಾನು. ನಿಮ್ಮನ್ನು ಯಜಮಾನರ ಬಳಿ ಕರೆದುಕೊಂಡು ಹೋಗುತ್ತೇನೆ."

"ನಿಜವೇ ?"

"ಸತ್ಯ ಗೌರಕ್ಕ ......ನನ್ನ ವಿರೂಪಾಕ್ಷಸ್ವಾಮಿ ಪಾದಸಾಕ್ಷಿಯಾಗಿ ಹೇಳುತ್ತಿದ್ದೇನೆ."

"ಏನಂದೆ ಕಾಮೂ" ಎಂದಳು ಸುಶೀಲ.

"ಹೌದು ಅಕ್ಕ. ಆ ಮಾತು ನಿಜ. ಗೌರಕ್ಕನ್ನ ಬಿಟ್ಟು ನಾನು ಇರು ವುದಿಲ್ಲ.

ಎಂದು ಎದ್ದು ನಿಂತಳು. ರಂಗಮ್ಮನ ಹೃದಯದಲ್ಲಿ ಹೇಳಬೇಕಾದ ವಿಷಯಗಳು ಬಹಳವಿದ್ದುವು. ಕಾಮಾಕ್ಷಿ ಹಣೆಗೆ ಕುಂಕುಮವಿಡುತ್ತಾ 'ನಿನ್ನ ಹೆತ್ತ ಹೊಟ್ಟೆ ತಣ್ಣಗಿರಲಮ್ಮ. ಆ ಮಹಾತಾಯಿ ಮನೆ ನಿತ್ಯವಾಗಲಿ' ಎಂದರು. ಕಾಮಾಕ್ಷಿ ರಂಗಮ್ಮನವರ ಕಾಲುಮುಟ್ಟಿ ನಮಸ್ಕಾರ ಮಾಡಿದಳು.

೨೦

ಕಾಲೇಜಿನ ಕಾಮನ್ ರೂಮಿನಲ್ಲಿ ಚರ್ಚೆಗೆ ಬರದೇ ಇರುವ ವಿಷಯವೇ ಇಲ್ಲ. ರಾಜಕಾರಣ, ಸಾಹಿತ್ಯ, ಕಾಲೇಜ್ ರಾಜಕಾರಣಗಳಲ್ಲದೆ ಹರಟೆ, ಸಮಾಜವ್ಯವಸ್ಥೆ, ವ್ಯಕ್ತಿ ಚರ್ಚೆಗಳೂ ಅಲ್ಲಿ ಸುಳಿಯುತ್ತಿದ್ದುವು. 'ಕಾಮನ್ ರೂಮಿಲ್ಲದ ಕಾಲೇಜು, ಕುಂಕುಮವಿಲ್ಲದ ಕೋಮಲೆಯ ಹಾಗೆ' ಎಂದು ಕಾಲೇಜ್ ಕವಿಗಳೊಬ್ಬರು ವರ್ಣಿಸಿದ್ದರು.

ಕ್ಲಾಸ್ ಮುಗಿದ ಕೂಡಲೇ ಕೇಶವಯ್ಯನೂ ಇತರ ಉಪಾಧ್ಯಾಯರಂತೆ ಕಾಮನ್ ರೂಮ್ ಸೇರುತ್ತಿದ್ದ. ಒಂದು ಗಂಟೆ ಅಂಟಿಕೊಂಡಿದ್ದ ಗಂಟಲಿಗೆ ಬಿಸಿಕಾಫಿ ಬಿದ್ದ ಕೂಡಲೆ ನಾಲಿಗೆ ಹರಿದಾಡುವುದಕ್ಕಾರಂಭಿಸುತ್ತಿತ್ತು.

ಚೆನ್ನಿಗರಾಮಯ್ಯ ಕೇಶವನ ಪರಮಸ್ನೇಹಿತ. ಇತಿಹಾಸಕ್ಕೂ ಸಾಹಿತ್ಯಕ್ಕೂ ಹೋರಾಟವಿಲ್ಲವೆಂದು ತೋರಿಸಲು ಅವರ ಸ್ನೇಹ ಕೂಡಿಬಂದ ಹಾಗಿತ್ತು. ಕಾಮನ್ ರೂಮಿನಲ್ಲಿ ಚರ್ಚೆಯಾದರೂ ಚೆನ್ನಿಗರಾಮಯ್ಯ, ಕೇಶವ ಒಂದು ಪಕ್ಷದಲ್ಲಿ ನಿಲ್ಲುತ್ತಿದ್ದರು. ಅವರ ಸ್ನೇಹ ಇತರ ಉಪಾಧ್ಯಾಯರ ಸ್ಪೃಹೆಗೂ ಕಾರಣವಾಗಿತ್ತು.

ಒಂದು ದಿನ ಚೆನ್ನಿಗರಾಮಯ್ಯನ ಮುಖ ಗಂಭೀರವಾಗಿದ್ದುದನ್ನು ಕೇಶವ ಕಂಡು

"ಏಕೆ ಮಿಸ್ಟರ್ ಮುಖ ಸೊರಗಿದೆ."

"ಕಾರಣವಿದೆ ಕೇಶವ್."

"ಅಪ್ಪಣೆ ಕೊಡಿಸಿ."

"ಇಲ್ಲಿ ಬೇಡಿ. ಹೊರಗೆ ಹೋಗೋಣ. ಈ ಪೀರಿಯಡ್ ಲೀಷರ್ ಇದೆ ತಾನೆ."

"ಇನ್ನೂ ಎರಡು ಪೀರಿಯಡ್ ಇದೆ."

ಇಬ್ಬರೂ ಕಾಲೇಜಿನ ಪರಿಮಿತಿಬಿಟ್ಟು ಸೆಂಚುರಿ ಕ್ಲಬ್ ಮುಂದಿದ್ದ ಹಸಿರು ಹಾಸಿನ ಮೇಲೆ ಕುಳಿತರು.

"ನಿಮಗೊಂದು ಬಹಳ ಮುಖ್ಯವಾದ ಸಂಗತಿ ಹೇಳಬೇಕಾಗಿದೆ ಕೇಶವ್."

"ಹೇಳಿ."

"ಈಚೆಗೆ ನೀವು ನಿಮ್ಮ ಮಾವನವರ ಮನೆಗೆ ಹೋಗಿಲ್ಲವೇ ?"

"ಈಚೆಗೇನು ? ನಾನು ಅಲ್ಲಿಗೆ ಹೋಗಿ ವರ್ಷಗಳಾದುವು."

"ನಿಮ್ಮ ನಾದಿನಿ ಗೌರಮ್ಮನ ಸುದ್ದಿ ಕೇಳಿದಿರಾ ?"

"ಏನು ?" ಕೇಶವನ ಧ್ವನಿಯಲ್ಲಿ ದುಗುಡವಿತ್ತು.

"ಆಕೆ ಗಂಡ ಪುನಃ ಮದುವೆಮಾಡಿಕೊಂಡರಂತೆ. ಗೌರಮ್ಮನಿಗೆ ಹುಚ್ಚು ಹಿಡಿದಿದೆಯಂತೆ."

"ನಿಜವೇ ?"

"ಇನ್ನೂ ಕೇಳಿ. ಮೊನ್ನೆ ಆ ಹುಡುಗಿ ಭಾವಿಗೆ ಬೀಳುವುದಕ್ಕೆ ಹೋಗಿದ್ದಳಂತೆ."

"ನಿಮಗೆ ಇದನ್ನು ಯಾರು ಹೇಳಿದರು."

"ನಮ್ಮ ಮನೆಯವರಿಗೆ ನಿಮ್ಮ ಅತ್ತೆಯವರು ಗೊತ್ತು."

"ಅಯ್ಯೋ ಪಾಪವೇ, ಎಷ್ಟು ಒಳ್ಳೆಯ ಹುಡುಗಿ."

"ಈಗ ನೀವೇನುಮಾಡುವಿರಿ ?"

"ಏನು ಮಾಡಲಿ ?"

"ಏನುಮಾಡಲಿ ಅಂದರೆ....ನಿಮ್ಮ ನಾದಿನಿ ಯೋಗಕ್ಷೇಮ ನಿಮಗೆ ಸೇರಿದ್ದಲ್ಲವೇ ?"

"ಹೌದು. ಆದರೆ ಈ ವಿಷಯದಲ್ಲಿ ನಾವು ಹೇಗೆ ಬಾಯಿಹಾಕುವುದು ಹೇಳಿ."

"ನಿಮ್ಮ ಮನೆಯವರಿಗೆ ಈ ಸುದ್ದಿ ಗೊತ್ತೇ ?"

"ಇಲ್ಲ. ಅವರಿಗೆ ಗೊತ್ತಿದ್ದರೆ ನನಗೂ ಗೊತ್ತಾಗುತ್ತಿತ್ತು."

"ನೋಡಿ. ಯೋಚನೆಮಾಡಿ."

ಎಂದು ಹೇಳಿದ. ಕೇಶವಯ್ಯನ ಮನಸ್ಸು ಅಸ್ತವ್ಯಸ್ತವಾಯಿತು. ಸೂಪರಿಂಟೆಂಡೆಂಟರ ಅಪ್ಪಣೆ ಪಡೆದು ಮನೆಗೆ ಹೊರಟುಬಿಟ್ಟ.

ಗಂಡ ಇಷ್ಟು ಬೇಗ ಬಂದುದನ್ನು ಕಂಡು ಸೀತಮ್ಮ ಆಶ್ಚರ್ಯಪಟ್ಟಳು ಯಾವುದೋ ಒಳ್ಳೆಯ ಸಿನೀಮಾಕ್ಕೆ ತನ್ನನ್ನು ಕರೆದುಕೊಂಡು ಹೋಗಲು ಬಂದಿದ್ದಾರೆಂದು ಭಾವಿಸಿದಳು.

"ಸೀತಾ."

"ಏನು ?"

"ಒಂದು ಸುದ್ದಿ ತಿಳಿಯಿತು. ಕಾಲೇಜಿಗೆ ರಜಾ ತೆಗೆದುಕೊಂಡು ಬಂದೆ. ಹೇಳುತ್ತೇನೆ, ಗಾಬರಿಪಟ್ಟುಕೊಳ್ಳಬೇಡ."

ಸೀತಮ್ಮನಿಗೆ ಹೀಠಿಕೆಯೇ ಸಾಕಷ್ಟು ಭಯವನ್ನುಂಟುಮಾಡಿತು.

"ಬೇಗ ಹೇಳೀಂದ್ರೆ."

"ಗೌರಿ...."

"ಹಾ ! ಗೌರಿ...."

"ಗೌರೀಗೆ ಹುಚ್ಚು ಹಿಡಿದಿದೆಯಂತೆ. ಅವಳ ಗಂಡ ಎರಡನೆ ಮದುವೆ ಮಾಡಿಕೊಂಡು ಬಂದಿದ್ದಾನಂತೆ. ನನ್ನ ಕಲೀಗ್ ಚೆನ್ನಿಗರಾಮಯ್ಯ ಹೇಳಿದ."

"ನಿಜವೇ ?"

"ಅವನು ಸುಳ್ಳು ಏಕೆ ಹೇಳುತ್ತಾನೆ."

"ನಮ್ಮಮ್ಮನ ಗ್ರಹಚಾರ ಇನ್ನೂ ಹರಿದಿಲ್ಲಾಂದ್ರೆ. ಶ್ರೀನಿವಾಸನಿ ಗೇನುಬಂತು ಕೇಡುಗಾಲ....ಗೌರಿ ಏನುಮಾಡುತ್ತಾಳಂತೆ."

"ವಿವರ ಅವನು ಹೇಳಲಿಲ್ಲ."

"ನಾನು ಹೋಗಿ ಅವಳನ್ನು ನೋಡಿಕೊಂಡು ಬರಲೇ ?"

"ನೀನೊಬ್ಬಳೇ ಹೋಗುತ್ತೀಯಾ ?"

"ನೀವೂ ಬರುವಿರಾ"

"ನೀನಿದ್ದಲ್ಲಿ ನಾನು...."

ಸೀತಮ್ಮ ಗಂಡನನ್ನು ಮನಸ್ಸಿನಲ್ಲಿಯೇ ಸಾವಿರಸಲ ಅಭಿನಂದಿಸಿದಳು.

ಹೊತ್ತುಗಳೆಯದೆ ಸೀತಮ್ಮ ಹೊರಡುವುದಕ್ಕೆ ಸಿದ್ಧಳಾದಳು. ಕೇಶವಯ್ಯ ಅವಳನ್ನು ಕರೆದುಕೊಂಡು ಮಾವನ ಮನೆಗೆ ಬಂದ. ಮಗಳು,

ಅಳಿಯ ಬಂದುದನ್ನು ಕಂಡು ಸುಬ್ಬರಾಯರು ತಮ್ಮ ಕಣ್ಣನ್ನು ತಾವೇ ನಂಬ ಲಿಲ್ಲ. ಒಳಗೆ ಹೋಗಿ ಹೆಂಡತಿಗೆ ತಿಳಿಸಿದರೆ

"ತಮಾಷೆ ಮಾಡುತ್ತೀರೇನಪ್ಪ" ಅಂದರು ರಂಗಮ್ಮ.

"ಇಲ್ಲ, ನೋಡು."

ಸೀತ ಬಂದು ಎದುರಿಗೆ ನಿಂತಳು. ಸುಬ್ಬರಾಯರು ಅಳಿಯನನ್ನು ಸ್ವಾಗತಿಸುವುದಕ್ಕೆ ಹೋದರು. ಅಳಿಯ, ಮಾವ ಎದುರುಬದುರು ನಿಂತಾಗ ಇಬ್ಬರಿಗೂ ಮಾತು ಹೇಗೆ ಆರಂಭಿಸಬೇಕೆಂದು ತಿಳಿಯಲಿಲ್ಲ. ಸುಬ್ಬರಾಯರೇ

"ದಯಮಾಡಿಸಿ" ಅಂದರು.

"ಚೆನ್ನಾಗಿದ್ದೀರಾ ?"

"ಇನ್ನೂ ಬದುಕಿದ್ದೇನೆ. ಯಮನಿಗಿನ್ನೂ ಕರುಣೆಬಂದಿಲ್ಲ.

"ಗೌರಿ ಹೇಗಿದ್ದಾಳೆ."

"ಒಳಗೆ ಬನ್ನಿ."

ಎಂದು ಕರೆದುಕೊಂಡು ಬಂದರು. ಗೌರ ನೋಡು ಮಲಗಿದ್ದಳು. ಅವಳ ಕರುಣಾಜನಕ ಸ್ಥಿತಿಯನ್ನು ಕಂಡು ಕೇಶವಯ್ಯ ಮುಖವನ್ನು ಓರೆ ಮಾಡಿದ.

"ಈಗ ಹೇಗಿದೆ ?"

"ಅವಳಿಗೇನೂ ಕಾಹಿಲೆಯಿಲ್ಲ. ಗಂಡನ ಹಂಬಲ. ಅವರು ಬಂದು ನೋಡಲಿಲ್ಲ—ಮಾತನಾಡಿಸಲಿಲ್ಲ ಎನ್ನುವುದೊಂದೇ ಕೊರಗು. ಅನ್ನ ತಿನ್ನಲ್ಲ, ನೀರು ಕುಡಿಯಲ್ಲ."

"ಮೊನ್ನೆ ಭಾವಿ ಬೀಳುವುದಕ್ಕೆ ಹೋಗಿದ್ದಳಂತೆ."

"ಹೂ, ಹೋಗಿದ್ದಳು. 'ಏಕಮ್ಮ ಹೀಗೆ ಮಾಡಿದೆ' ಎಂದು ಕೇಳಿದರೆ 'ಯಾರಿಗೂ ಬೇಡದ ಬಾಳು ಇದ್ದೇನು ಪ್ರಯೋಜನ ಅಣ್ಣಾ' ಎಂದಳು. ಚೆನ್ನಾಗಿ ಮಾತನಾಡುತ್ತಾಳೆ."

"ಆಸ್ಪತ್ರೆಗೆ ಕಳುಹಿಸಿದ್ದರೆ...."

"ಹೇಗೆ ಕಳುಹಿಸಲಿ."

"ನಿಮ್ಮ ಮಗಳಿಗೆ ಸನಿಗೂ ನಿಮಗೂ ಕೇವಲವಲ್ಲ. ನೋಡಿ ಮಾತನಾಡ ಬಾರದೇನು."

ಎಂದು ಸೀತಮ್ಮ ಹೇಳಿದಳು. ಕೇಶವ ಯೋಚಿಸಿ "ಆಗಲಿ. ನಾಳೆ ಸಾಧ್ಯವಾದರೆ ಕರೆದುಕೊಂಡು ಬರುತ್ತೇನೆ."

ಅಳಿಯನ ಜತೆ ಎಂದೂ ಮಾತನಾಡದಿದ್ದ ರಂಗಮ್ಮ ಕಣ್ಣೀರಿನ ಮಧ್ಯೆ

"ನಮ್ಮದೇನು ತಪ್ಪಾಗಿದ್ದರೂ ಮರೆತು ನೀವು ಬಂದಿರಲ್ಲಾ, ನಿಮಗೆ ನಾವು ಎಷ್ಟು ಋಣಿಗಳಾಗಿದ್ದರೂ ಸಾಲದು."

"ತಪ್ಪು ನಿಮ್ಮದಲ್ಲ, ನನ್ನದು. ನನಗೂ ಹುಡುಗು, ವಿವೇಕ ಸಾಲದು. ಅವಿವೇಕಿಗಳ ಮಾತು ಕೇಳಿಕೊಂಡು ನಾನೂ ಅವಿವೇಕಿಯ ಹಾಗೆ ಆಡಿದೆ. ಸೀತಾ ಚೆನ್ನಾಗಿ ಬುದ್ಧಿ ಕಲಿಸಿದಳು."

ಗೌರ ಕಣ್ಣುಬಿಟ್ಟು ನೋಡಿ ಪಕ್ಕದಲ್ಲಿ ಸೀತಕ್ಕ ಇದ್ದುದನ್ನು ಕಂಡು

"ಯಾರು—ಸೀತಕ್ಕನೇ."

"ಹೌದು, ಗೌರಾ ನಾನೇ."

"ಅದು ಯಾರು ?"

"ನಿನ್ನ ಭಾವ."

"ಇಲ್ಲಿ ಬನ್ನಿ ಭಾವ."

ಕೇಶವಯ್ಯ ಹತ್ತಿರ ಕುಳಿತು ಅವಳ ತಲೆ ನೇವರಿಸಿದ. ಗೌರ ಅವನನ್ನು ಚೆನ್ನಾಗಿ ನೋಡಿ

"ಕೋಪ ಹೋಯಿತೇ ಭಾವ."

"ಯಾರಮೇಲೆ ಕೋಪ."

"ಅಮ್ಮನ ಮೇಲೆ— ಅಪ್ಪನ ಮೇಲೆ."

"ಕೋಪ ಎಂದೋ ಹೋಗಿತ್ತು ಗೌರಾ. ಸ್ವಲ್ಪ ಜಂಭ ಇತ್ತು. ಅದೂ ಹೋಯಿತು."

"ನೀವು ತುಂಬಾ ಒಳ್ಳೆಯವರು ಭಾವ. ನೀವು ತಂದುಕೊಟ್ಟ ಸೀರೆ ನಲುಗದ ಹಾಗೆ ಇಟ್ಟುಕೊಂಡಿದ್ದೇನೆ."

"ನೀನು ಎದ್ದು ಯಾವಾಗ ನಮ್ಮ ಮನೆಗೆ ಬರುತ್ತೀ ಗೌರ."

"ಅವರು ಯಾವಾಗ ಕರೆದುಕೊಂಡುಬಂದರೆ ಆಗ. ಈ ಸಲವೂ ನೀವು ಸೀರೆ ಕೊಟ್ಟರೆ ನಾನು ತೊಗೊಳ್ಳಲ್ಲ ಭಾವಾ."

"ಪಲಪಲಕ್ಕೊ ಕೊಡುತ್ತಾರೇನೇ ಗೌರ" ಎಂದು ರಂಗಮ್ಮ ಕೇಳಿದರು.

"ಭಾವಯ್ಯನ್ನ ನೀನು ಕಾಣೆಯಮ್ಮ. ಅವರು ರಾಜಕುಮಾರರ ಹಾಗೆ ಹುಟ್ಟಬೇಕಾಗಿತ್ತು."

"ಗೌರ, ಬೇಗ ಎದ್ದು ತಿರುಗಾಡಮ್ಮ—ನೀನು ಹೀಗೆ ಮಲಗಿರುವುದನ್ನು ನಾನು ನೋಡಲಾರೆ."

ಎಂದು ಹೇಳುತ್ತ ಕೇಶವನ ಕಣ್ಣುಗಳು ಮಂಜಾಗುತ್ತ ಬಂದುವು.

"ಇದೇನು ಭಾವ. ನೀವೂ ಕಣ್ಣೀರು ಹಾಕುತ್ತೀರಿ. ನಾನು ಹುಷಾರಾಗಿಯೇ ಇದ್ದೇನಲ್ಲ ಅವ್ಮಾ...."

"ಏನು ತಾಯಿ?"

"ನನ್ನ ತಂಗಿ ಕಾಮಾಕ್ಷಿಯನ್ನು ನೀತಕ್ಕ ನೋಡಿಯೇ ಇಲ್ಲ ಅಲ್ಲವೇ?"

"ಅವಳು ನೋಡಿಲ್ಲಮ್ಮ."

"ಯಾರಮ್ಮ ಕಾಮಾಕ್ಷಿ?" ಎಂದು ಸೀತಕ್ಕ ಕೇಳಿದಳು.

"ಅವಳು ಒಬ್ಬ ದೇವತೆ. ಹೇಗಿದ್ದಾಳಂತಕ್ಕ—ಕೈತೊಳೆದುಕೊಂಡು ಮುಟ್ಟಬೇಕು"

ರಂಗಮ್ಮನವರು ಕಾಮಾಕ್ಷಿ ಬಂದಿದ್ದು, ಅವಳೂ ಗೌರ ಮಾತನಾಡಿದುದೆಲ್ಲವನ್ನೂ ವಿವರಿಸಿದರು.

ಸುಬ್ಬರಾಯರು ಹೊರಗೆ ಬಂದು ಕುಳಿತುಬಿಟ್ಟಿದ್ದರು. ಕೇಶವಯ್ಯ ಒಂದು ಅವರ ಬಳಿ ಕುಳಿತು

"ಯೋಚನೆಮಾಡಬೇಡಿ. ಗೌರ ಮಹಾಪತಿವ್ರತೆ. ಅವಳಿಗೆ ಯಾವ ಹಾನಿಯೂ ತಟ್ಟುವುದಿಲ್ಲ. ಎಲ್ಲಾ ಒಳ್ಳೆಯದೇ ಅಂದುಕೊಳ್ಳೋಣ."

"ಆ ಕಾಮಾಕ್ಷಮ್ಮನ್ನ ನೀವು ನೋಡಿಲ್ಲ ಕೇಶವಯ್ಯ. ಗೌರಿ ಹೇಳಿದ ಹಾಗೆ ಆ ಹುಡುಗಿ ನಿಜವಾಗಿಯೂ ದೇವತೆ. 'ಗುಣವಾದ ಮೇಲೆ ನಾನು ನಿನ್ನ ಗಂಡನ ಬಳಿ ಕರೆದುಕೊಂಡು ಹೋಗುತ್ತೇನೆ' ಎಂದು ಹೇಳಿಹೋದಳು. ಅವಳನ್ನು ನೋಡಿದಂದಿನಿಂದ ಗೌರ ಎಷ್ಟೋ ವಾಸಿ."

"ಹಾಗಾದರೆ ಸಮಸ್ಯೆ ಇನ್ನೂ ಕಠಿಣವಾಯಿತು."

"ಕಂಡವರ ಮನೆ ಮಗಳು. ಅವಳೂ ಸುಖವಾಗಿರಲಿ. ಆಕೆ ಯಂದಿರು ಇಬ್ಬರನ್ನೂ ಕಾಪಾಡಲಿ. ಸ್ವಲ್ಪ ಅವನನ್ನು ಕಾಣುವುದು ಸಾಧ್ಯವೇ?"

"ನಾಳೆ ಅದೇ ಮೊದಲನೆಯ ಕೆಲಸ. ಅವರು ಒಪ್ಪಿದರೆ ಇಲ್ಲಿಗೆ ನಾನೇ ಕರೆದುಕೊಂಡು ಬರುತ್ತೇನೆ."

"ಅಷ್ಟು ಮಾಡಿದರೆ......"

"ಇನ್ನೇನೂ ಹೇಳಬೇಡಿ ಮಾವನವರೇ."

ಎಂದು ಕೇಶವಯ್ಯ ಹೇಳಿದ.

## ೨೨

ಕೇಶವಯ್ಯನಿಗೆ ದೊಡ್ಡ ಯೋಚನೆ ಹತ್ತಿತು. ಶ್ರೀನಿವಾಸನನ್ನು ಎಲ್ಲಿ ಕಾಣುವುದು? ಅವನ ಮನೆಗೆ ಹೋದರೆ ತುಂಬ ಜನ. ಮಾತನಾಡುವುದಕ್ಕೆ ಆಗುವುದಿಲ್ಲ. ಅವರು ಎಲ್ಲಿ ಹೋಗುತ್ತಾರೋ ಬರುತ್ತಾರೋ ಗೊತ್ತಿಲ್ಲ. ಕಾಗದ ಬರೆದು ಕಳುಹಿಸಿದರೆ ಅವರು ಬರುತ್ತಾರೋ ಇಲ್ಲವೋ? ಯೋಚನೆಮಾಡಿ—ಅವರ ಮನೆಗೇ ಹೋಗುವುದು ಅಲ್ಲಿಂದ ಅವನನ್ನು ಹೊರಗೆ ಕರೆದುಕೊಂಡು ಹೋಗಿ ಮಾತನಾಡುವುದು ಎಂದು ನಿಶ್ಚಯಿಸಿದ.

ಸಂಜೆ ಶ್ರೀನಿವಾಸನ ಮನೆ ಮುಂದೆ ಬೈಸಿಕಲ್ ನಿಲ್ಲಿಸಿ ಒಳಗೆ ಹೋದ. ಸುಶೀಲ ಅವನನ್ನು ಗುರುತಿಸಿ

"ಬನ್ನಿ" ಎಂದಳು.

ಶ್ರೀನಿವಾಸ ಒಳಗಿನಿಂದ ಬಂದು ಕೇಶವಯ್ಯನನ್ನು ಮಾತನಾಡಿಸಿದ. ಇಬ್ಬರೂ ಕುಳಿತಮೇಲೆ

"ಏನು ಇಷ್ಟು ಅಪರೂಪವಾಗಿ ದಯಮಾಡಿಸಿದ್ದು."

"ನನಗೆ ಹೊಸ ನಾದಿನಿ ಬಂದಿದ್ದಾರೆಂದು ತಿಳಿಯಿತು. ನೋಡಿಕೊಂಡು ಹೋಗೋಣ ಎಂದು ಬಂದೆ."

"ಕಾಮೂ, ಕಾಮೂ......"

ಕಾಮೂ ಬರಲು, ಕೇಶವಯ್ಯ ಎದ್ದು ಕೈಮುಗಿದ.

"ಇವರು ನನ್ನ ಷಡ್ಡಕಂದಿರು. ಕಾಲೇಜಿನಲ್ಲಿ ಉಪಾಧ್ಯಾಯರು."

"ನಮ್ಮ ಮನೆಗೆ ನೀವು ಬರಬೇಕೆಂದು ಕರೆದುಹೋಗಲು ಬಂದೆ."

"ಆಗಲಿ ಬರುತ್ತೇವೆ."

ಎಂದು ಕಾಮು ಹೇಳಿದಳು. ಕೇಶವಯ್ಯ ಶ್ರೀನಿವಾಸನಿಗೆ

"ಸ್ವಲ್ಪ ಹೊರಗೆ ಸುತ್ತಾಡಿಕೊಂಡು ಬರೋಣವೇ ?"

"ಆಗಬಹುದು."

ಎಂದು ಕೋಟು ತಗಲಿಸಿಕೊಂಡು ಶ್ರೀನಿವಾಸ ಅವನ ಜತೆ ಹೊರಟ. ಇಬ್ಬರೂ ಬ್ಯೂಗಲ್ ರಾಕ್ ಬಳಿ ಬಂದು ಕುಳಿತರು.

"ಯಾವಾಗ ಬಂದಿರಿ ಊರಿಗೆ ಶ್ರೀನಿವಾಸ್?"

"ಎರಡು ವಾರವಾಯಿತು."

"ಮನೆಕಡೆ ಬರಲೇ ಇಲ್ಲ."

"ಪುರಸತ್ತೇ ಆಗಲಿಲ್ಲ."

"ಕಾಮಾಕ್ಷಮ್ಮನ್ನೂ ಕರೆದುಕೊಂಡು ಬನ್ನಿ."

"ಆಗಲಿ. ಅದಕ್ಕೇನು ? ಏನೋ ಮಾತನಾಡಬೇಕೂ ಅಂದಿರಲ್ಲಾ."

"ನಾನು ಮಾತನಾಡುವ ಹಕ್ಕು ಇಲ್ಲ. ನಿಮ್ಮನ್ನ ನನ್ನ ಸ್ನೇಹಿತರು ಎಂದು ತಿಳಿದುಕೊಂಡು ಈ ಸ್ವಾತಂತ್ರ್ಯ ವಹಿಸುತ್ತೇನೆ."

"ಆಗಲಿ ಹೇಳಿ."

"ನಾನು ಯಾವ ಆಕ್ಷೇಪಣೆಯನ್ನೂ ಮಾಡುವುದಿಲ್ಲ ಶ್ರೀನಿವಾಸ್. ಆದ್ದು ಆಗಿಹೋಯಿತು. ಈಗಲೂ ನೀವು ಗೌರಿಯನ್ನು ಮನೆಗೆ ಕರೆದುಕೊಂಡು ಹೋಗಬಾರದೇ ? ನಿಮ್ಮ ಹೆಸರು ಹೇಳಿಕೊಂಡು ಹುಡುಗಿ ಪ್ರಾಣ ಬಿಡುತ್ತಿದೆ."

"ಅದು ಸಾಧ್ಯವಿಲ್ಲ ಕೇಶವ್."

"ಏಕೆ ?"

"ನಮ್ಮ ತಾಯಿಗೂ ಅವಳಿಗೂ ಕೂಡುವುದಿಲ್ಲ."

"ತಾಯಿ ಮಾತು ಕೇಳಿಕೊಂಡು ನಿರಪರಾಧಿ ಹುಡುಗಿಯನ್ನು ಬೀದಿಗೆ ನೂಕುತ್ತೀರೇನು ?"

"ಅವಳಿಗೆ ಬೇಕಾಗಿದ್ದುದೂ ಅದೇ."

"ಆ ಮಾತೂ ನಿಮಗೆ ನಿಮ್ಮ ತಾಯಿಯೇ ಹೇಳಿದರೋ ?"

"ನಮ್ಮ ತಾಯಿಯ ಬಗ್ಗೆ ತಿರಸ್ಕಾರದಿಂದ ಮಾತನಾಡಬೇಡಿ."

"ನೀವು ಮಾಡುತ್ತಿರುವುದು ಯಾವ ನ್ಯಾಯ ಶ್ರೀನಿವಾಸ್."

"ಎಲ್ಲಾ ನಿಮ್ಮಲ್ಲಿ ಹೇಗೆ ಬಾಯಿಬಿಡಲಿ ಕೇಶವ್. ಸಂಸಾರದಲ್ಲಿ ನೂರೆಂಟು ಹುಳುಕುಗಳಿರುತ್ತವೆ."

"ಇಂಥ ಕಠಿಣಶಿಕ್ಷೆ ಅನುಭವಿಸುವುದಕ್ಕೆ ಗೌರಿ ಮಾಡಿದ ಅಪರಾಧ ವೇನು ತಿಳಿಸಿಬಿಡಿ."

"ಮನೆ ಸಾಮಾನು ಕದ್ದು, ಗೌರಿ ಅವಳು ತೌರುಮನೆಗೆ ಸಾಗಿಸು ತ್ತಿದ್ದಳು."

"ಶ್ರೀನಿವಾಸ್. ನಾನೂ ನನ್ನ ಅತ್ತೆಮಾವನ ಮೇಲೆ ಇಷ್ಟು ದಿವಸ ಗುರುಗುಟ್ಟಿದೆ. ಸಾಯುತ್ತಾ ಆಸ್ಪತ್ರೆಯಲ್ಲಿ ಬಿದ್ದಿದ್ದ ಮಗಳನ್ನು ನೋಡು ವುದಕ್ಕೆ ಕೂಡ ಅವರಿಗೆ ನಾನು ಅವಕಾಶಕೊಡಲಿಲ್ಲ. ನಿಮಗೆ ನೆನಪಿರ ಬಹುದು. ನಿಮ್ಮ ಮದುವೆಗೆ ಬರುವುದಕ್ಕೆ ಕೂಡ ನಾನು ಸೀತನಿಗೆ ಅವ ಕಾಶಕೊಡಲಿಲ್ಲ. ಆದರೆ ನಾನು ನಿಮ್ಮ ಆಪಾದನೆ ಒಪ್ಪಲ್ಲ. ಸುಬ್ಬರಾಯರು ಬಡವರು ತುಂಬ ಬಡವರು -ಆದರೆ ತುಂಬ ಮಾನಿಷ್ಠರು. ಆತ್ಮಗೌರವ ಅವರ ಹಿರಿಸಂಪತ್ತು."

"ನಮ್ಮ ತಾಯಿ ಸುಳ್ಳು ಹೇಳುತ್ತಾರೆಯೇ ?"

"ಈ ಮಾತು ನಿಮ್ಮ ಅತ್ತಿಗೆ ಹೇಳಿಬಿಡಲಿ. ನಾನು ಒಪ್ಪಿಕೊಳ್ಳು ತ್ತೇನೆ."

"ಅವರೂ ಗೌರಿ ಒಂದೇ ಪಕ್ಷ."

"ನಿಮ್ಮ ತಾಯಿ ಒಬ್ಬರೇ ಸತ್ಯ ಹೇಳುವವರು–ಉಳಿದವರೆಲ್ಲಾ ಸುಳ್ಳು ಗಾರರೋ ?"

"ನನಗೊಂದೂ ಬಗೆಹರಿಯುವುದಿಲ್ಲ ಕೇಶವ್."

"ಕಾಮಾಕ್ಷಮ್ಮ ಕೂಡ ಗೌರಿಯನ್ನು ಮೆಚ್ಚಿಕೊಂಡಿದ್ದಾರೆ. ಅವ ರಿಬ್ಬರೂ ಅನ್ಯೋನ್ಯವಾಗಿ ಬಾಳಬಲ್ಲರು. ದಯೆಯಿಟ್ಟು ನನ್ನ ಮಾತು ಕೇಳಿ. ಗೌರಿಯನ್ನು ಕೈಬಿಡಬೇಡಿ. ಮುಂದೆ ಬಹಳ ಪಶ್ಚಾತ್ತಾಪಪಡುವಿರಿ. ಕಾರ್ಯ ಕೈಮಿಂಚಿ ಹೋದಮೇಲೆ ಮರುಗಿ ಫಲವಿಲ್ಲದಂತಾಗುತ್ತದೆ."

"ನನಗೆ ಈ ಉಪದೇಶ ಸಾಕು ಕೇಶವ್. ನೀವ್ರೂಂತ ನಾನು ಇಷ್ಟು ಕೇಳಿಕೊಂಡೆ. ಇನ್ನು ನನಗೆ ಇಂಥ ಮಾತು ಹೇಳಬೇಡಿ. ಗುಡ್-ಬಯ್"

ಎಂದು ಶ್ರೀನಿವಾಸ ಅಲ್ಲಿಂದೆದ್ದು ಹೊರಟೇಬಿಟ್ಟ.

ಕೇಶವ ಸಪ್ಪೆ ಮೋರೆ ಹಾಕಿಕೊಂಡು ಮನೆಗೆ ಹೊರಟ.

ಅವನ ಸಂಧಾನ ನಿಷ್ಫಲವಾದುದನ್ನು ಕೇಳಿ ಸೀತಮ್ಮ ಮರುಗಿದಳು. ಕ್ರೂರವಿಧಿ ಗೌರಿಯ ಬಾಳನ್ನು ಅಂಧಕಾರದಲ್ಲಿ ಒಯ್ಯುತ್ತಿದೆ—ಎಲ್ಲಿಗೆ ಎಂದು ಯಾರೂ ಕಾಣರು. ಎಲ್ಲರೂ ಬೆಳಕು ತೋರಬೇಕೆಂದು ಆಶಿಸುತ್ತಿದ್ದರು. ಆದರೆ ಬೆಳಕು ಹತ್ತಿದಲ್ಲಿಯೇ ಆರಿಹೋಗುತ್ತಿತ್ತು.

೨೩

ಕಾಮಾಕ್ಷಮ್ಮ ಮತ್ತೆ ಎರಡು ಸಲ ಸುಶೀಲನ ಜತೆ ಹೋಗಿ ಗೌರಿಯನ್ನು ನೋಡಿಬಂದಳು. ಅವಳು ಮೇಲಿಂದ ಮೇಲೆ ಗೌರಿಯ ಮನೆಗೆ ಹೋಗಿಬರುವುದನ್ನು ಕಂಡು ಫಣಿಯಮ್ಮ, ಶ್ರೀನಿವಾಸ ಅವಳನ್ನು ಹೊಸ ಪೇಟೆಗೆ ಹೊತ್ತು ಹಾಕಿಬಿಡಬೇಕೆಂದು ಯೋಚಿಸಿದರು. ಕಾಮಾಕ್ಷಿಗೆ ತಂದೆಯಿಂದ ಕಾಗದವೂ ಬಂದಿತ್ತು. ಅದಕ್ಕೆ ಅವಳು ಉತ್ತರ ಬರೆದಿದ್ದಳು.

ಅಣ್ಣಾ,

ಪ್ರತಿ ಮನುಷ್ಯನಿಗೂ ಒಂದು ಗುರಿಯಿರಬೇಕು. ಅದನ್ನು ಮುಟ್ಟುವುದಕ್ಕೆ ಅವನು ತನ್ನ ತನು, ಮನ, ಧನವನ್ನು ತ್ಯಾಗಮಾಡಬೇಕು ಎಂದು ಹೇಳುತ್ತಿದ್ದಿರಿ. ನನ್ನ ಗುರಿ ಯಾವದು ಎಂದು ಬಹಳ ಯೋಚಿಸಿದೆ. ಇಲ್ಲಿಗೆ ಬಂದಮೇಲೆ ನನಗೆ 'ಗುರಿ' ಕಂಡುಬಂತು.

ನನಗೆ ಈಗ ಕೈತುಂಬ ಕೆಲಸ. ನನ್ನ ಕೆಲಸವಿರುವುದು ಇಲ್ಲೇ ಎಂದು ಧೈರ್ಯವಾಗಿದೆ. ಅದನ್ನು ಮುಗಿಸುವ ತನಕ ನಾನು ಹೊಸ ಪೇಟೆಗೆ ಬರುವುದಿಲ್ಲ. ನನ್ನ ಮಗಳು ಹಿಡಿದ ಕೆಲಸ ಅರ್ಧಮಾಡಿ ಬಂದಳು ಎಂದು ನೀವು ದುಃಖಿಸಬಾರದು.

ಈ ಕೆಲಸ ನಾನು ಸಾಧಿಸಿದರೆ ನನಗೆ ಮತ್ತು ನನ್ನ ಜೀವಕ್ಕೆ ಹತ್ತಿಕೊಂಡಿರುವ ಇತರ ಜೀವಿಗಳಿಗೆ ಕಲ್ಯಾಣವಾಗುತ್ತದೆ. ಆಗಲೇಬೇಕು.

ನಿಮ್ಮ ಮತ್ತು ತಮ್ಮನ ಪೂರ್ಣ ಆಶೀರ್ವಾದದ ಬೆಂಬಲ ನನಗೆ ಬೇಕು.

ಇಂತು ನಿಮ್ಮ ಪ್ರೀತಿಯ ಮಗಳು

ಕಾಮೂ

ಗಂಡಸಿಗೆ ಕಾಗದ ತೋರಿಸಿ ಅದನ್ನು ಅಂಚೆಗೆ ಕಳುಹಿಸಿದಳು. ಅವನು ಕೇಳಿದ

"ಏನನು ನಿನ್ನ ಗುರಿ?"

"ನಿಮಗೆ ಗೊತ್ತಿಲ್ಲವೇ?"

"ಗೊತ್ತಿಲ್ಲ."

"ಈ ಮನೆಯಲ್ಲಿ ನನ್ನ ಸ್ಥಾನ ನಾಲ್ಕಾಣೆಯ ಅಂಶ. ಇನ್ನು ನಾಲ್ಕಾಣೆಯ ಅಂಶದ ಅಧಿಕಾರಿ ಒಬ್ಬಳಿದ್ದಾಳೆ. ಅವಳಿಗದು ಸೇರಬೇಕು."

"ಗೌರಿಯನ್ನು ನೀನು ಹೋಗಿ ನೋಡಿಬರುತ್ತಿರುವುದು ನನಗೆ ಗೊತ್ತಿದೆ."

"ತುಂಬ ಒಳ್ಳೆಯದೇ ಆಯಿತು."

"ಅವಳ ಜನ ನಿನ್ನ ತಲೆಯಲ್ಲಿ ಇಲ್ಲದ ವಿಚಾರಗಳನ್ನು ತುಂಬಿದ್ದಾರೆ."

"ಯಾರೂ ತುಂಬಿಲ್ಲ. ಅವಳನ್ನು ನೋಡಿ ನಾನೇ ತುಂಬಿಕೊಂಡು ಬಂದಿದ್ದೇನೆ. ಗೌರಿ ಮಾಡಿದ ತಪ್ಪೇನು?"

"ಅದು ಸ್ವಲ್ಪದರಲ್ಲಿ ಮುಗಿಸುವ ಮಾತಲ್ಲ."

"ಹೋಗಲಿ. ಮದುವೆಯಾಗಿಲ್ಲ ಎಂದು ನಮ್ಮ ತಾಯಿತಂದೆಗೆ, ರಾಜಾರಾಯರಿಗೆ ಸುಳ್ಳೇಕೆ ಹೇಳಿದಿರಿ?"

"ಸಂದರ್ಭ ಹಾಗೆ ಬಂದುಬಿಟ್ಟಿತು."

"ನಾನು ಬಂದು ಈ ಮುದುಗಿ ಜೀವಕ್ಕೆ ಮೃತ್ಯುವಾಗಲೇ?"

"ಹಾಗೆ ಯಾರು ಹೇಳಿದರು."

"ನೀವೂ—ನಿಮ್ಮ ತಾಯಿ."

"ಕಾಮೂ........"

"ಹೆದರಿಸಬೇಡಿ. ಹೆಣ್ಣು ಅಬಲೆ ನಿಜ. ಆದರೆ ಪ್ರಬಲೆಯೂ ಹೌದು. ಆ ನನ್ನ ಅಕ್ಕನ ಹತ್ಯೆ ನನ್ನಿಂದಾಗುವುದಿಲ್ಲ. ನಿಮ್ಮ ತಾಯಿ ತಪ್ಪುಲೆಕ್ಕ ಹಾಕಿದರು."

"ನೀನು ವಿಪರೀತ ಮಾತನಾಡುತ್ತಿದ್ದೀ."

"ಮನಸ್ಸಿನಲ್ಲಿರುವುದನ್ನು ಮುಚ್ಚಿಕೊಳ್ಳದೆ ಆಡುತ್ತಿದ್ದೇನೆ. ನಿಮಗೆ ಕೋಪ ಬರಬಹುದು. ಬಂದರೂ ನಾನು ಹೆದರುವವಳಲ್ಲ."

"ನೀನು ಇಂಥ ಗಟ್ಟಿಗಾಣಿ ಎಂದು ನನಗೆ ಗೊತ್ತಿರಲಿಲ್ಲ."

"ಹೌದು. ನೀವು ಮಾಡುವ ಅನ್ಯಾಯಗಳಿಗೆ ನಾವು ಹೂಗೊಡುತ್ತಿದ್ದರೆ ಆಗ ನಾವು ಅವರ್ಣಪತ್ನಿಯರು."

"ಈಗ ನಿನು ಮಾಡಬೇಕೆಂತೀ."

"ಗೌರಿಯನ್ನು ನೀವು ಕರೆದುಕೊಂಡು ಬರಬೇಕು."

"ಸಾಧ್ಯವಿಲ್ಲ ಎಂದರೆ ನೀನು ಹೊರಟುಹೋಗುತ್ತೀಯಾ."

"ಹೋಗುವುದಕ್ಕಲ್ಲ ನಾನು ಬಂದಿರುವುದು."

"ತಾಯಿ ಒಪ್ಪಿದರೆ ಆಗಬಹುದು."

"ಗೌರಿ ಜತೆ ಸಂಸಾರ ಮಾಡುವವರು ನಿಮ್ಮ ತಾಯಿಯಲ್ಲ."

"ಹಾಗಾದರೆ ಆ ಮಾತು ಬಿಟ್ಟುಬಿಡು."

"ನನ್ನ ತಂದೆ ಸಂಪತ್ತಿಲ್ಲದೇ ಗೌರಿಗೆ ಮೃತ್ಯುವಾದದ್ದು."

"ಕಾಮಾಕ್ಷಿ......."

"ಗೌರಿ ಬಡವರ ಮನೆ ಹೆಣ್ಣು."

"ಕಾಮಾಕ್ಷಿ .. ...."

"ನಾನು ಲಕ್ಷಾಧೀಶ್ವರನ ಮಗಳು."

"ಸಾಕು ನಿಲ್ಲಿಸು ಕಾಮೂ."

"ನನಗಾಗಿ ಅವಳನ್ನು ಬಲಿಕೊಡಲು ಸಿದ್ಧರಾಗಿದ್ದೀರಿ."

"ಅವಳು ಹುಚ್ಚಿಯಾದರೆ ನಾನೇನು ಮಾಡಲಿ."

"ಯಾರವಳಿಗೆ ಹುಚ್ಚು ಎಂದು ಹೇಳಿದವರು."

"ಲೋಕವೇ ಹೇಳುತ್ತೆ."

"ಆ ಲೋಕದ ತುಂಬ ನಿಮ್ಮ ತಾಯಿ ಒಬ್ಬರೇ ಇರುವುದು."

"ಬಾಯಿಮುಚ್ಚು ಕಾಮಾಕ್ಷಿ."

"ನಾನು ಬಾಯಿ ಮುಚ್ಚುವುದಿಲ್ಲ."

ಎಂದಳು. ಶ್ರೀನಿವಾಸನಿಗೆ ಕೋಪ ನೆತ್ತಿಗೇರಿತು. ಅವಳ ಕೆನ್ನೆಗೆ ಛಳೀರೆಂದು ಹೊಡೆದ. ಕಾಮಾಕ್ಷಿ ಸ್ಮೃತಿ ತಪ್ಪಿ ಕೆಳಗೆ ಬಿದ್ದಳು. ಅವಳನ್ನು ಉಪಚರಿಸುವುದಕ್ಕೂ ಅವನಿಗೆ ಮನಸ್ಸಿಲ್ಲ. ಅಲ್ಲಿ ನಿಲ್ಲದೆ ಹೊರಟು ಬಿಟ್ಟ.

ಸುಶೀಲ ಬಂದು ಕಾಮಾಕ್ಷಿಯನ್ನೆತ್ತಿ ಹಾಸಿಗೆಯ ಮೇಲೆ ಮಲಗಿಸಿ ಉಪಚರಿಸಿದಳು. ಕಾಮಾಕ್ಷಿ ಕಣ್ಣುಬಿಟ್ಟು

"ಅಕ್ಕಾ-- ಅವರು ಹೊರಟುಹೋದರೇ ?" ಎಂದಳು.

"ಹೋದರಮ್ಮಾ."

ಕಾಮಾಕ್ಷಿಯ ಕೆನ್ನೆಯ ಮೇಲೆ ಬೆರಳುಗಳ ಗುರುತು ಚೆನ್ನಾಗಿ ಮೂಡಿದ್ದುವು. ಸುಶೀಲ ಅದನ್ನು ಮೃದುವಾಗಿ ನೇವರಿಸಿದಳು.

"ನೋಯುತ್ತಿದೆಯೇ ಕಾಮಾಕ್ಷಿ."

"ಇಲ್ಲ ಅಕ್ಕ. ನೋಯುತ್ತಿಲ್ಲ."

"ಕಣ್ಣಿನಿಂದ ನೀರು ಕೂಡ ಬರಲಿಲ್ಲವಲ್ಲ ಕಾಮಾಕ್ಷಿ. ಎಂಥ ಸ್ಥಿರ ಮನಸ್ಸು ತಾಯಿ ನಿನ್ನದು."

"ಅಕ್ಕಾ-ಗೌರಕ್ಕನನ್ನು ಕರೆದುಕೊಂಡು ಬರುವವರೆಗೆ ನನ್ನ ಮನಸ್ಸಿಗೆ ಸಮಾಧಾನವಿಲ್ಲ. ಹೇಳಿ, ಏನುಮಾಡೋಣ."

"ನೋಡು. ಇನ್ನೊಂದು ಸಲ ನಿನ್ನ ಯಜಮಾನರಿಗೇ ಹೇಳಿನೋಡು."

"ಅವರಿಗೆ ತಾಯಿಭೂತ ಹಿಡಿದಿದೆ. ಯಾವ ಮಾತೂ ಅವರ ಕಿವಿಯ ಮೇಲೆ ಬೀಳುವಹಾಗಿಲ್ಲ."

ಇಬ್ಬರೂ ದಿಕ್ಕುಗಾಣದೆ ಯೋಚಿಸುತ್ತಾ ಕುಳಿತರು.

## ೨೪

ಶ್ರೀನಿವಾಸನಿಗೆ ತನ್ನನ್ನು ಕಂಡು ತುಂಬ ಹೇಸಿಗೆಯಾಗಿತ್ತು. ಕಾಮುವನ್ನು ಹೊಡೆದ ಕೈ ಸುಟ್ಟರೆ ಪಾಪ ಹೋಗುವುದು ಎಂದು ಯಾರಾದರೂ ಸಲಹೆಯಿತ್ತಿದ್ದರೆ ಅದನ್ನು ಬೆಂಕಿಗೊಡ್ಡುವುದಕ್ಕೆ ಅವನು ಹಿಂಜರಿಯುತ್ತಿರಲಿಲ್ಲ. ಅವನ ಮನಸ್ಸು 'ಕಾಮೂ-ಕಾಮೂ' ಎಂದು ಕಾತರಿಸುತ್ತಿತ್ತು. ಅವಳು ಗೌರಿಯನ್ನು ಮುಂದೆ ಚಾಚಿ ಹಿಂದಕ್ಕೆ ಸರಿದಿದ್ದಳು. ಕಾಮುವಿನ ನಡತೆ

ಕಂಡು ಶ್ರೀನಿವಾಸನಿಗೆ ತುಂಬ ಕೋಪವೂ ಇತ್ತು. ಆದರೆ ತಾನು ದುಡುಕಿದುದು ತಪ್ಪಾಯಿತೆಂದು ಅವನಿಗೆ ಗೊತ್ತಾಗಿತ್ತು. 'ಅವಳೂ ಕೋಪ ಮಾಡಿಕೊಂಡು ಹೊಸಪೇಟೆಗೆ ಹೊರಟುಹೋದರೆ?' ಎಂದು ಯೋಚಿಸಿದ! 'ಹೋಗುವುದಿಲ್ಲ ಎಂದು ಭರವಸೆಯಿತ್ತಿದ್ದಾಳೆ. ಗುರಿಯನ್ನು ಸಾಧಿಸುತ್ತಾಳಂತೆ, ಗುರಿ' ಎಂದು ನಕ್ಕ.

ಅವನು ಮನೆಗೆ ಬಂದ ಕೂಡಲೇ, ಧಾವಿಸಿ ಹೋಗಿ ಕಳಚಿದ ಅವನ ಕೋಟನ್ನು ತೆಗೆದುಕೊಳ್ಳುವುದು ಕಾಮೂ ಪದ್ಧತಿ. ಅಂದು ಕಳಚಿದ ಕೋಟನ್ನು ತಾನೇ ಹಿಡಿದು ಗೂಟಕ್ಕೆ ಹಾಕಿ ರೂಮಿನಲ್ಲಿ ಯೋಚಿಸುತ್ತಾ ಕುಳಿತ. ಅವನನ್ನು ಯಾರೂ ಊಟಕ್ಕೂ ಎಬ್ಬಿಸಲಿಲ್ಲ. ತಾಯಿ ಹಳ್ಳಿಗೆ ಹೋಗಿದ್ದರು. ಅವರಿದ್ದರೆ ಚೆನ್ನಾಗಿತ್ತು ಎಂದುಕೊಂಡು ತಾಯಿಗೆ ಕಾಗದ ಬರೆದ. ಕುಳಿತು ಕುಳಿತು ಬೇಸತ್ತು

"ಕಾಮೂ—ಕಾಮೂ" ಎಂದು ಕರೆದ.

ಕಾಮೂ ಬಂದು ಮೌನವಾಗಿ ಎದುರಿಗೆ ನಿಂತಳು.

"ನನ್ನ ಮೇಲೆ ಕೋಪವೇ ಕಾಮೂ."

"ಏತಕ್ಕೆ."

"ಹೊಡೆದುದಕ್ಕೆ."

"ಅದಕ್ಕೆ ಕೋಪವಿಲ್ಲ."

"ಇನ್ನು ಏತಕ್ಕೆ."

"ಗೌರಿ ವಿಷಯಕ್ಕೆ."

"ತಿರುಗಿ ಅದೇ ಸುದ್ದಿ ತೆಗೆಯುವೆಯಲ್ಲಾ."

"ನನಗೆ ಬೇರೆ ಸುದ್ದಿಯೇ ಬೇಕಿಲ್ಲ."

"ಈ ವಿಷಯದಲ್ಲಿ ನಿನ್ನ ಮನಸ್ಸು ಗಟ್ಟಿ ಮಾಡಿದ್ದೀ ಅನ್ನು."

"ನಿಸ್ಸಂದೇಹವಾಗಿ."

"ಧ್ವನಿಯಲ್ಲಿ ಇಷ್ಟು ಗಡುಸೇಕೆ ಕಾಮೂ."

"ಅದು ಹೃದಯದ ಗಡುಸು."

"ಹಾಗಾದರೆ ನಾನು ನಿನ್ನ ಕಣ್ಣಿನಲ್ಲಿ ಇಷ್ಟು ಸಣ್ಣವನಾದೆನೇ?"

"ಇಲ್ಲ ಎಂದು ಹೇಳುವುದು ಉಪಚಾರದ ಮಾತು—ಸುಳ್ಳು."

"ನಾವೂ ನನ್ನ ಕ್ಷಮಿಸು."

"ಎಲ್ಲರನ್ನು ಕ್ಷಮಿಸಬೇಕಾದವಳು ಗೌರಮ್ಮ."

"ಅವಳನ್ನು ಮರೆತುಬಿಡಲಾರೆಯಾ ?"

"ಈ ಜನ್ಮದಲ್ಲಿ ಸಾಧ್ಯವಿಲ್ಲ. ನಾನು ಹುಟ್ಟಿದ ಮನೆ, ಸೇರಿದ ಮನೆ ಎರಡೂ ನಂದಗೋಕುಲದ ಹಾಗಿರಬೇಕೆಂದು ನನ್ನ ಆಸೆ. ಗೌರಿಯ ಗೋರಿಯ ಮೇಲೆ ನನ್ನ ಸುಖದ ಗೋಪುರವನ್ನು ಕಟ್ಟಲಾರೆ."

"ನನಗೆ ನೀನು ಬೇಕು ನಾನೂ. ಈ ಸಾಂತ್ವನದಲ್ಲಿಯೂ ಆಸನಂಬಿಕೆ ಇಟ್ಟುಕೊಳ್ಳಬೇಡ."

"ನಾನು ಎಂದರೆ ಗೌರಮ್ಮ. ಗೌರಮ್ಮನೆಂದರೆ ನಾನು. ನಾನು ಬೇಕಾದರೆ ಅವಳನ್ನೂ ನೀವು ಸಮಾನವಾಗಿ ಕಾಣಬೇಕು."

"ಇಬ್ಬರೂ ಬೇಡ—ತೊಲಗು—ತೊಲಗು."

ಎಂದು ಕಿರಿಚಿದ. ಅವನ ಧ್ವನಿ ಕೇಳಿ ನರಸಿಂಹಮೂರ್ತಿ ಓಡಿಬಂದ.

"ಏನೋ ಅದು ಶ್ರೀನಿವಾಸ."

"ಏನೂ ಇಲ್ಲ"

ಎಂದು ಮುಖ ತಿರುಗಿದ.

ಮಗನ ಕಾಗದ ನೋಡಿ ಫಣಿಯಮ್ಮ ಮೂರನೇ ದಿನವೇ ಬಸ್ಸಿನಲ್ಲಿ ಬಂದಿಳಿದರು. ಶ್ರೀನಿವಾಸ ಕಾಮಾಕ್ಷಿಯ ಕಲ್ಲುಮನಸ್ಸನ್ನು ತಾಯಿಗೆ ವರ್ಣಿಸಿದ.

"ಇವಳಿಗೆಲ್ಲಿ ಗಂಟುಬಿತ್ತೋ ಈ ಭೇತಾಳ" ಎಂದಳು.

"ಅಮ್ಮಾ ಈ ಸಮಸ್ಯೆ ತಂದೊಡ್ಡಿದವಳು ನೀನು. ನೀನೇ ಇದನ್ನು ಪರಿಹರಿಸು."

"ಕಾಮಾಕ್ಷಿಗೆ ಹೇಳಿ ನೋಡುತ್ತೇನಪ್ಪ ಸಮಾಧಾನ ತಂದುಕೋ"

ಎಂದು ಮಗನನ್ನು ಸಂತೈಸಿದಳು.

ಫಣಿಯಮ್ಮ ಕಾಮಾಕ್ಷಿಯೊಬ್ಬಳನ್ನೇ ಕೂಡಿಸಿಕೊಂಡು ಎರಡು ಗಂಟೆ ಕಾಲ ಗೌರಿಯ ದೌರ್ಜನ್ಯವನ್ನು ವರ್ಣಿಸಿದರು. ಅವಳ ನಕ್ಷತ್ರವೇ ಕೆಟ್ಟ ನಕ್ಷತ್ರ. ಅವಳು ಕಾಲಿಟ್ಟ ಕಡೆ ಹಾಳು—ಅವಳು ಇದ್ದಷ್ಟು ದಿನವೂ ಶೀನು ಒಂದಲ್ಲ ಒಂದು ಕಾಹಿಲೆ ಅನುಭವಿಸಿದ—ಅವನು ಫೇಲಾದದ್ದೂ ಅವಳಹೀನ

ಅದೃಷ್ಟದ ಲಕ್ಷಣ ಎಂದು ತಿಳಿಸಿದರು. ಕಾಮಾಕ್ಷಿ ಎಲ್ಲವನ್ನೂ ಸಾವಧಾನ ದಿಂದ ಕೇಳಿಕೊಂಡಳು.

ಫಣಿಯಮ್ಮನಿಗೆ ಉತ್ತೇಜನ ಸಿಕ್ಕಿದಂತಾಯಿತು.

"ನೀನು ಆ ಅನಿಷ್ಟಾನ ಹೋಗಿ ಹೋಗಿ ನೋಡಿಕೊಂಡು ಬರುವುದೇ ನನಗೆ ಇಷ್ಟವಿಲ್ಲವಮ್ಮಾ."

"ಹೋಗಿ ನೋಡಿ ಬರುವುದು ನನ್ನ ಕರ್ತವ್ಯ."

"ನಿಜಾನ್ನ. ಜನದ ಬಾಯಿಗೆ ಹೆದರಿಯಾದರೂ ಹೋಗಿ ಬರ ಬೇಕಾಗತ್ತೆ."

"ಜನರ ಬಾಯಿಗೆ ಹೆದರಿ ನಾನು ಹೋಗುತ್ತಿರಲಿಲ್ಲ ಅತ್ತೆ. ನನ ಗೋಸ್ಕರವೇ ಹೋಗುತ್ತಿದ್ದೆ."

"ನಿನಗೋಸ್ಕರ........"

"ಹೌದು. ಗೌರಮ್ಮನ್ನ ಕಂಡರೆ ಹೊಟ್ಟೆಯಲ್ಲಿ ಸಂಕಟವಾಗತ್ತೆ."

"ಆಗಲ್ವೇನಮ್ಮ. ಯಾರಿಗಾಗಲ್ಲ. ಮರ್ಯಾದೆಯಾಗಿ ಬಾಳಿಕೊಂಡು ಸುಖವಾಗಿರೋದು ಅದರ ಹಣೇಲಿ ಬರೆಯಲಿಲ್ಲ. ನಾನೂ ಗಿಣೀಗೆ ಹೇಳುವ ಹಾಗೆ ಹೇಳಿದೆ. ಹೊಟ್ಟೆಯಲ್ಲಿ ಹುಟ್ಟಿದ ಮಗಳಿಗಿಂತಲೂ ಹೆಚ್ಚಾಗಿ ನೋಡಿ ಕೊಂಡೆ. ಎಲ್ಲಿ ಕೆಲಸಕಾರ್ಯ ಮಾಡಿದರೆ ಸವೆದುಹೋಗುತ್ತಾಳೋ ಅಂತಾ ನಾನೇ ಎಲ್ಲಾ ಮಾಡಿಕೊಂಡು ಹೋಗುತ್ತಿದ್ದೆ. ಹೀನಸುಳಿ ಬೋಳಿಸಿದರೆ ಹೋಗುತ್ತದೆಯೇ ಅಂತ ಗಾದೆ ಇರೋಹಾಗೇ ಆಯ್ತು. ಜನ ನಮ್ಮನ್ನ ನೋಡಿ ನಗುವಹಾಗೆ ಮಾಡಿದಳು. ಸುಮ್ಮಸುಮ್ಮನೆ ನನ್ನ ಕೆಟ್ಟೋಳು ಮಾಡಿದಳು."

"ಎಲ್ಲಾ ಸರಿ ಅತ್ತೆ. ಮೊದಲೇ ಮದುವೆಯಾಗಿದ್ದ ವಿಷಯ ನೀವೇಕೆ ಹೊಸಪೇಟೆಯಲ್ಲಿ ತಿಳಿಸಲಿಲ್ಲ"

"ತಿಳಿಸಿದ್ದರೆ ನಿನ್ನ ಶೀನೂಗೆ ಕೊಡೋದಿಕ್ಕೆ ನಿಮ್ಮಪ್ಪ ಒಪ್ಪು ತ್ತಿದ್ದರೋ?"

"ನನಗೆ ಗೊತ್ತಿಲ್ಲ."

"ನೀನು ಇಲ್ಲದ ಕಷ್ಟವ್ಯಸನ ಹಚ್ಚಿಕೊಳ್ಳಬೇಡ, ಸುಖವಾಗಿರು."

"ಅಲ್ಲಿ ಗೌರಿ ಸಾಯುತ್ತಾ ಬಿದ್ದಿರಲಿ ನಾನು ಸುಖವಾಗಿರುತ್ತೇನೆ."

" ಏನು ಗೌರಿಗೌರಿ ಅಂತ ಬಡಕೊಳ್ಳುತ್ತೀಯೇ. ಅವಳೇನು ನಿನ್ನ ಸೋದರತ್ತೆ ಮಗಳೇ? "

" ಅಲ್ಲ, ನನ್ನ ಅತ್ತೆ ಹಿರಿ ಸೊಸೆ."

ಮಾತು ಅಲ್ಲಿಗೆ ನಿಂತುಹೋಯಿತು. ಫಣಿಯಮ್ಮ ಕಾಮಾಕ್ಷಿ ಎದ್ದು ಹೋಗುತ್ತಲೆ ಲಟಲಟ ನೆಟ್ಟಿಗೆ ಮುರಿದರು.

ಶ್ರೀನಿವಾಸ ಯಾರೋ ಅತಿಥಿಗಳನ್ನು ಕರೆದುಕೊಂಡು ಬಂದು

" ಕಾಮೂ, ಇಲ್ಲಿ ನೋಡು ಯಾರು ಬಂದಿದ್ದಾರೆ? " ಎಂದ.

ಕಾಮು ನೋಡಿ ಸಂತೋಷದಿಂದ

" ಮಾವಯ್ಯ, ಯಾವಾಗ ಬಂದಿರಿ? "

" ನಾನು ಹೊಸಪೇಟೆ ಬಿಟ್ಟು ಎರಡುವಾರವಾಯಿತಮ್ಮ. ಮೈಸೂರಿಗೆ ಹೋಗಿದ್ದೆ. ಮಗಳು ಹೆತ್ತಿದ್ದಾಳೆ. ಅವಳನ್ನು ನೋಡಿದ ಹಾಗೂ ಆಯ್ತು, ಗಿರೀಗೆ ಗಂಡು ನೋಡಿದ ಹಾಗೂ ಆಯ್ತು ಎಂದು ರಜಾ ತೆಗೆದುಕೊಂಡು ಹೊರಟೆ."

"ಗಂಡು ಸಿಕ್ಕಿತೇ? "

"ಇಷ್ಟು ಬೇಗ ಎಲ್ಲಿ ಸಿಕ್ಕುತ್ತಮ್ಮ. "

"ಅಣ್ಣ ಏನು ಹೇಳಿದರು? "

"ನೀನು ಬರಲಿಲ್ಲಾಂತ ತುಂಬ ಪೇಚಾಡಿದರು. ಯಾವಾಗ ಬರುತ್ತೀ ಕಾಮಾಕ್ಷಿ."

"ಬರ್ತೀನೆ. ಬರದೇ ಉಂಟೇ? "

"ಇವತ್ತು ನಾಳೆ ಇರುತ್ತೀರಷ್ಟೆ."

"ಇಲ್ಲಮ್ಮ. ರಾತ್ರೀಗೆ ಹೊರಟುಬಿಡುತ್ತೇನೆ."

"ನಮ್ಮ ಮನೆ ಹೇಗೆ ಸಿಕ್ಕಿತು? "

"ಹುಡುಕಾಡುತ್ತಿದ್ದೆ. ನಿಮ್ಮ ಯಜಮಾನರು ಸಿಕ್ಕಿ ಕರೆದುಕೊಂಡು ಬಂದರು."

" ಇವತ್ತು ಇಲ್ಲೇ ಊಟಕ್ಕೇಳಿ ಸಾರ್ " ಎಂದು ಶ್ರೀನಿವಾಸ ಹೇಳಿದ.

" ಇಲ್ಲಪ್ಪ. ಇನ್ನೂ ಕೆಲಸಗಳಿವೆ. ಇನ್ನೊಂದು ಸಲ ಬಂದಾಗ ಇಲ್ಲೇ ಬಂದು ನಾಲ್ಕು ದಿವಸ ಇದ್ದುಬಿಡುತ್ತೇನೆ. "

ಎಂದು ರಾಜಾರಾಯರು ಸಮಾಧಾನ ಹೇಳಿದರು.

"ಹೋಗಿ ಮಾವಯ್ಯಾ. ಅಪರೂಪಕ್ಕೆ ಬಂದಿದ್ದೀರಿ. ಒಪ್ಪತ್ತು ಊಟಕ್ಕೆ ಇರಲ್ಲ ಅಂತೀರಿ."

"ನಾನೇನು ಹೊರಗಿನವನೇ ಕಾಮಾಕ್ಷಿ. ಇಷ್ಟು ಉಪಚಾರ ಹೇಳುತ್ತೀಯಲ್ಲ. ಮುಂದಿನಸಲ ಬಂದಾಗ ಖಂಡಿತ ಬರುತ್ತೇನಮ್ಮ. ನಿಮ್ಮ ತಂದೆಯವರಿಗೆ ಏನು ತಿಳಿಸಲಿ."

"ಎಲ್ಲರೂ ಚೆನ್ನಾಗಿದ್ದೇವೆ ಎಂದು ತಿಳಿಸಿ."

"ಎರಡು ಮೂರು ದಿವಸಕ್ಕೆ ಕಾಗದ ಬರೆಯುತ್ತಿರಮ್ಮ. ಅವರಿಗೆ ನಿನ್ನ ಹಂಬಲವೇ ಆಗಿಹೋಗಿದೆ."

"ಆಗಲಿ ಮಾವಯ್ಯ."

ರಾಜಾರಾಯರು ಅವಳೊಂದಿಗೆ ಇನ್ನೇನೋ ಮಾತನಾಡಬೇಕೆಂದು ಹವಣಿಸಿದರು. ಎದುರಿಗೆ ಶ್ರೀನಿವಾಸ ಇದ್ದುದರಿಂದ ಅವರು ಬಾಯಿಬಿಡಲಿಲ್ಲ.

ರಾಜಾರಾಯರನ್ನು ಕಳುಹಿಸಿಬಂದು ಶ್ರೀನಿವಾಸ

"ಕಾಮೂ, ನಿಮ್ಮ ತಂದೆತಾಯಿ ತುಂಬ ಹಂಬಲಿಸುತ್ತಿದ್ದಾರಂತೆ ಹೊಸಪೇಟೆಗೆ ಹೋಗಿಬರೋಣವೆ."

"ನಾನೆಲ್ಲಿಗೂ ಹೊರಡುವುದಿಲ್ಲ"

"ನೀನು ಬಹಳ ಹಟವಾದಿ ಕಣೇ"

"ಹಾಗೆ ನೀವೇ ಮಾಡಿದ್ದೀರಿ."

"ಹೋಗಲಿ ಬಿಡು. ಏನು ಅತ್ತೆ ಸೊಸೆ ಬಹಳ ಸರಸವಾಗಿ ಮಾತನಾಡುತ್ತಿದ್ದಿರಲ್ಲಾ."

"ಅವರು ನನಗೆ ಉಪದೇಶ ಕೊಡುತ್ತಿದ್ದರು."

"ಏನು ಉಪದೇಶ ?"

"ಇನ್ನೇನು ? ಗೌರಕ್ಕನನ್ನು ಹೋಗಿನೋಡಬೇಡವೆಂದು."

"ಹೌದು, ಮೇಲಿಂದ ಮೇಲೆ ಅಲ್ಲಿಗೇಕೆ ಹೋಗಿಬರಬೇಕು."

"ದಯೆಯಿಟ್ಟು ಆ ಮಾತು ಹೇಳಬೇಡಿ. ನಾನು ಒರಟಾಗಿ ಉತ್ತರ ಕೊಡಬೇಕಾಗಿ ಬರತ್ತೆ."

"ನಾನು ಹೋಗಕೂಡದೆಂದು ಕಟ್ಟಪ್ಪಣೆಮಾಡಿದರೆ?"

"ಮಾಡಿ ನೋಡೋಣ"

ಎಂದು ಶ್ರೀನಿವಾಸನನ್ನು ತೀಕ್ಷ್ಣವಾಗಿ ನೋಡಿದಳು. ಅವಳನ್ನು ಕತ್ತೆತ್ತಿ ನೋಡುವ ಧೈರ್ಯ ಶ್ರೀನಿವಾಸನಿಗಾಗಲಿಲ್ಲ.

೨೫

ಗೌರಿ ಪರಿಸ್ಥಿತಿ ದಿನದಿನಕ್ಕೆ ಕೆಡುತ್ತಾ ಬಂತು.

ಕಾಮಾಕ್ಷಿ ಅವಳಿಗೆ ಕೊಟ್ಟಿದ್ದ ಆಶ್ವಾಸನ ಕೆಲವು ದಿವಸ ಅವಳನ್ನು ರಕ್ಷಿಸಿತ್ತು. ಅದೂ ಉಪಚಾರದ ಮಾತು ಎಂದು ಗೌರಿ ಭಾವಿಸಿದಳು. ಸೀತಕ್ಕ, ಕೇಶವ ಅಲ್ಲೇನಿಂತು ಗೌರಿಯನ್ನುಪಚರಿಸುತ್ತಿದ್ದರು. ಸೀತಕ್ಕ ಹೇಳುತ್ತಿದ್ದ ಧೈರ್ಯದ ಮಾತುಗಳಲ್ಲಿಯೂ ಗೌರಿಗೆ ನಂಬಿಕೆ ಹೋಗುತ್ತಾ ಬಂತು.

ಹುಚ್ಚು ವಿಕೋಪಕ್ಕೇರಿತು. ಇದ್ದಕ್ಕಿದ್ದಂತೆ.

"ಅವರು ಬಂದರು. ಬಂದರು" ಎಂದು ಕೂಗಿಕೊಂಡು ಗೌರಿ ಬೀದಿಗೆ ಓಡಿಹೋಗುತ್ತಿದ್ದಳು. ಅವಳನ್ನು ಹಿಡಿದು ಹಾಸಿಗೆಮೇಲೆ ಮಲಗಿಸಬೇಕಾದರೆ ಮನೆಯವರಿಗೆ ಸಾಕುಸಾಕಾಗುತ್ತಿತ್ತು. ಗೌರಿ ಮತ್ತೆ ಆತ್ಮಹತ್ಯಮಾಡಿಕೊಳ್ಳಲೆತ್ನಿಸಿದಳು. ತನ್ನಪ್ರಯತ್ನಕ್ಕೆ ಅಡ್ಡಿಬಂದರೆಂದು ತಾಯಿ, ಸೀತಕ್ಕನ ಮೇಲೆ ಕಿಡಿಕಿಡಿಯಾದಳು.

ಗೌರಿಯನ್ನು ನೋಡಬಂದ ಕಾಮಾಕ್ಷಿ ಆ ವಿವರಗಳನ್ನು ಕೇಳಿ ವಿಚಾರ ಪರವಶಳಾದಳು. 'ಇನ್ನು ಗೌರಿ ಹೆಚ್ಚುದಿನ ಬದುಕುವುದು ದುಸ್ಸಾಧ್ಯ' ಎಂಬ ಸತ್ಯ ಅವಳಲ್ಲಿ ಮೂಡಿತು. ಗೌರಿಗಾಗಿ ಏನು ಬೇಕಾದರೂ ಮಾಡಲು ಕಾಮಾಕ್ಷಿ ಸಿದ್ಧಳಾಗಿದ್ದಳು. ಗೌರಿಯನ್ನು ಮನೆಗೆ ಕರೆತರಲು ವಿಶ್ವ ಪ್ರಯತ್ನ ಮಾಡಿದ್ದಳು. ಶ್ರೀನಿವಾಸ, ಫಣಿಯಮ್ಮ ಅವಳ ಎಲ್ಲ ಪ್ರಯತ್ನವನ್ನೂ ಮುರಿದಿದ್ದರು.

ಕಾಮಾಕ್ಷಿ ಮನಸ್ಸು ತುಂಬ ಬೇಸರಗೊಂಡಿತ್ತು. ಅವಳು ಮನೆಗೆ ಹಿಂದಿರುಗಿದಾಗ ಗಂಡ ಕಾದಿದ್ದ.

"ಏಳು ಕಾಮೂ—ಇವತ್ತು ಒಳ್ಳೆಯ ಪಿಕ್ಚರ್ ಇದೆ. ಹೋಗಿ ಬರೋಣ" ಎಂದ.

ಕಾಮಾಕ್ಷಿ ಯೋಚಿಸಿ

"ಇಗೋಬಂದೆ" ಎಂದು ಬಟ್ಟೆ ಬದಲಾಯಿಸಿಕೊಂಡು, ಹೆರಳಿಗೊಂದು ಗುಲಾಬಿಹೂ ಸಿಕ್ಕಿಸಿಕೊಂಡು ಬಂದಳು.

ಶ್ರೀನಿವಾಸ ಹೆಂಡತಿಯ ಸೌಜನ್ಯವನ್ನು ಕಂಡು ಆನಂದತುಂದಿಲನಾದ ಇಬ್ಬರೂ ಸಾಗರ್ ಟಾಕೀಸಿನಲ್ಲಿ ನಡೆಯುತ್ತಿದ್ದ "ರಾಮರಾಜ್ಯ" ಚಿತ್ರದಲ್ಲಿ ಹೋಗಿ ಕುಳಿತರು. ಚಿತ್ರದಲ್ಲಿಯೂ ಅದೇ ಪ್ರಶ್ನೆ. ಶ್ರೀನಿವಾಸ ಮಾಡಿದ್ದ ಕೆಲಸವನ್ನೇ ರಾಮನೂ ಮಾಡಿದ್ದ. ಆದರೆ ರಾಮು ಎರಡನೇ ಮದುವೆ ಮಾಡಿಕೊಳ್ಳುವ ಗೋಜಿಗೆ ಬಿದ್ದಿರಲಿಲ್ಲ. ಶ್ರೀನಿವಾಸನಿಗೆ ಚಿತ್ರದ ಸಂಗೀತ ನಾಟ್ಯಗಳ ಕಡೆ ಲಕ್ಷ್ಯ. ಕಾಮಾಕ್ಷಿಗೆ ಅದರ ಕಥೆಯ ಕಡೆ ಗಮನ.

ಮನೆಗೆ ಹಿಂದಿರುಗುವಾಗ ಶ್ರೀನಿವಾಸ ಕೇಳಿದ

"ಚಿತ್ರ ಹೇಗಿತ್ತು ?"

"ತುಂಬ ಚೆನ್ನಾಗಿತ್ತು: ರಾಮು ಮಾಡಿದ್ದು ನೀವು ಒಪ್ಪುವಿರಾ?"

"ಅವನೇನು ತಪ್ಪು ಮಾಡಲಿಲ್ಲವಲ್ಲಾ"

ಕಾಮಾಕ್ಷಿ ಮುಂದೆ ಮಾತುಬೆಳಸುವ ಹವ್ಯಾಸಕ್ಕೆ ಬೀಳಲಿಲ್ಲ.

ಅಂದು ಕಾಮಾಕ್ಷಿ ಒಂದು ತುತ್ತು ಅನ್ನ ಹೆಚ್ಚು ಊಟ ಮಾಡಿದಳು.

"ಅಷ್ಟು ಹಸಿವಾಗಿತ್ತೇ ಕಾಮೂ. ಅಲ್ಲೇ ಏನಾದರೂ ತಿಂಡಿ ತರಿಸಿ ತಿನ್ನಬಹುದಾಗಿತ್ತಲ್ಲಾ" ಎಂದು ಸುಶೀಲ ಕೇಳಿದಳು.

"ಹೋಟಲ್ ತಿಂಡಿ ಸೇರೊಲ್ಲ ಅಕ್ಕ. ನೀವು ಅನ್ನ ಸಾರು ಮಾಡಿದರೂ ಎಷ್ಟು ಚೆನ್ನಾಗಿ ಮಾಡುತ್ತೀರಿ."

"ಹೆಣ್ಣಾಗಿ ಹುಟ್ಟಿದ್ದಕ್ಕೆ ಅಷ್ಟೂ ಬೇಡವೇನಮ್ಮ."

ಕಾಮಾಕ್ಷಿ ಗಂಡನ ಜೊತೆ ಬಹಳ ಹೊತ್ತು ಮಾತನಾಡುತ್ತಾ ಕುಳಿತಳು. ಮಧ್ಯೆ ಗೌರಿ ಸುದ್ದಿ ಬರದಿದ್ದನ್ನು ಕಂಡು ಶ್ರೀನಿವಾಸನಿಗೆ ಎಷ್ಟೊ ಸಮಾಧಾನ. ಮಲಗಿದ ಕೂಡಲೇ ಶ್ರೀನಿವಾಸನಿಗೆ ನಿದ್ರೆ ಹತ್ತಿತು. ಕಾಮಾಕ್ಷಿ ಎದ್ದು ಕುಳಿತು ನಿದ್ರಾಸಕ್ತನಾಗಿದ್ದ ಗಂಡನನ್ನು ದಿಟ್ಟಿಸಿ ನೋಡಿದಳು. ಅವನ ಮುಖದ ಮೇಲೆ ಕಿಡಕಿಯಿಂದ ತೆಳುವಾದ ಬೆಳದಿಂಗಳು ಬಿದ್ದು

ಮುಖಕ್ಕೆ ಅಪೂರ್ವ ಕಾಂತಿಯನ್ನಿತ್ತಿತ್ತು. ಅವನ ಸರಳ ಹೃದಯ ಮುಖದ ಮೇಲೆ ಪ್ರತಿಬಿಂಬಿತವಾಗಿತ್ತು.

"ಮಗುವಿನಂತೆ ಮಲಗಿ ನಿದ್ರಿಸುತ್ತಿದ್ದಾರೆ. ಹೃದಯದಲ್ಲಿ ಎಳ್ಳಷ್ಟೂ ಕಲ್ಮಷವಿಲ್ಲ."

ಎಂದುಕೊಂಡಳು. ಮರುಕ್ಷಣವೇ ಗೌರಿಯ ನೆನಪಾಯಿತು.

"ಅವಳ ಮೇಲೇಕೆ ಹೀಗೆ ಕ್ಷಾತ್ರ ಸಾಧಿಸುತ್ತಾರೆ."

ಎಂದು ವಿಚಾರ ಮಾಡಿದಳು.

"ತಾಯಿಯ ಉಪದೇಶ" ಎಂದು ನಿರ್ಧರಿಸಿಕೊಂಡಳು. ಕಾಮಾಕ್ಷಿ ಮಲಗಿ ನಿದ್ರಿಸಲೆತ್ನಿಸಿದಳು. ನಿದ್ರೆ ಬಳಿ ಸುಳಿಯಲಿಲ್ಲ. ಮತ್ತೆ ಮತ್ತೆ ಎದ್ದು ಕುಳಿತು ಗಂಡನ ಮುಖವನ್ನು ಎವೆಯಿಕ್ಕದೆ ನೋಡಿದಳು. ಅವನನ್ನು ನೋಡುತ್ತ ನೋಡುತ್ತ ಅವಳ ಮನಸ್ಸು ವಿಚಿತ್ರ ಅನುಭವಕ್ಕೀಡಾಯಿತು.

ತನ್ನ ಸ್ಥಿತಿಯನ್ನು ನೆನೆದಳು. ಕಣ್ಣಲ್ಲಿ ನೀರು ಬಂತು.

" ನಾನು ಯಾವ ಅಪರಾಧ ಮಾಡಿದ್ದಕ್ಕೆ ಈ ಶಿಕ್ಷೆ"

ಎಂದುಕೊಂಡಳು. ಅದಕ್ಕೆ ಉತ್ತರ ಕೊಡಬಲ್ಲ ಶ್ರೀನಿವಾಸ ಗಾಢ ನಿದ್ರೆಯಲ್ಲಿದ್ದ.

ಬೆಳಿಗ್ಗೆ ಎದ್ದು ಶ್ರೀನಿವಾಸ ಸ್ನಾನ, ಫಲಾಹಾರ ತೀರಿಸಿಕೊಂಡು

"ಪೇಟೆಗೆ ಹೋಗಿ ಬರುತ್ತೇನೆ ಕಾಮೂ. ಮನೆಗೆ ಏನಾದರೂ ಸಾಮಾನು ಬೇಕಾಗಿತ್ತೇನು?"

" ಏನೂ ಇಲ್ಲ" ಎಂದಳು.

ಅವಳೂ ಸ್ನಾನ ತೀರಿಸಿಕೊಂಡು, ತುಲಸೀ ಪೂಜೆ ಮಾಡಿ ಮುಗಿಸಿ

" ಅಕ್ಕಾ" ಎಂದು ಕೂಗಿದಳು.

ಸುಶೀಲಾ ಬರುತ್ತಲೆ ಅವಳ ಹಣೆಗೆ ಕುಂಕುಮವಿಟ್ಟು ಕಾಲು ಮುಟ್ಟಿ ನಮಸ್ಕಾರ ಮಾಡಿದಳು.

" ಇದೇನಮ್ಮ."

" ಏನೋ ಮಾಡಬೇಕು ಅನ್ನಿಸಿತು ಅಕ್ಕಾ"

" ಏನು ಯೋಚನೆ ಮಾಡುತ್ತಿದ್ದೀ ಕಾಮೂ."

" ನಾನೀಗ ಹೊರಟಿದ್ದೇನೆ."

" ಎಲ್ಲಿಗೆ ?''

" ಗೌರಕ್ಕನ ಮನೆಗೆ.''

" ಬರುವುದು ?''

" ಅವರು ಬಂದು ಗೌರಕ್ಕನ್ನ ನನ್ನ ಕರೆದುಕೊಂಡು ಬಂದಾಗ.''

" ಕಾಮೂ........ ........''

" ಏನಕ್ಕ ?''

" ಇದೇನು ನಿರ್ಧಾರವೇ ತಾಯಿ ?''

" ನನ್ನ ಸ್ಥಳ ಗೌರಕ್ಕನ ಬಳಿಯಲ್ಲಿ ಅಕ್ಕಾ.''

" ಬೇಡಮ್ಮ—ಹೋಗಬೇಡ ಇದೇ ಒಂದು ಪಂಚಾಯಿತೀಗೆ ಇಟ್ಟು ಕೊಂಡೀತು ?''

" ಅಕ್ಕಾ—ನಾನು ಬಹಳ ಯೋಚಿಸಿ ಈ ನಿರ್ಧಾರಕ್ಕೆ ಬಂದಿದ್ದೇನೆ. ನೀವು ನನ್ನ ಮನಸ್ಸು ತಿರುಗಿಸಬೇಡಿ ''

" ನಿನ್ನ ಇಷ್ಟ ತಾಯಿ. ದೇವರು ಒಳ್ಳೆಯದು ಮಾಡಲಿ ''

ಎಂದು ಕಾಮಾಕ್ಷಿಯನ್ನಪ್ಪಿದಳು.

" ಅಕ್ಕಾ........ ...''

" ಏನು ?''

" ನೀವು ಅಲ್ಲಿಗೆ ಆಗಾಗ್ಗೆ ಬರುತ್ತಿರಿ.''

" ಅದಕ್ಕೇನು ಆಗಲಿ.''

ಕಾಮಾಕ್ಷಿ ತನ್ನ ಕೆಲವು ಬಟ್ಟೆಬರೆಗಳನ್ನು ತೆಗೆದುಕೊಂಡು ಒಂದು ಗಾಡಿ ಕರೆದು ಹೊರಟೇಬಿಟ್ಟಳು.

ಶ್ರೀನಿವಾಸ ಮನೆಗೆ ಬಂದ ಕೂಡಲೆ ಸುಶೀಲ ಅವನಿಗೆ ಸುದ್ದಿ ಮುಟ್ಟಿಸಿ

" ಹೋಗಿ ಅವಳನ್ನು ಕರೆದುಕೊಂಡು ಬನ್ನಿ " ಎಂದಳು.

" ನಾನು ಹೋಗುವದಿಲ್ಲ ಅತ್ತಿಗೆಮ್ಮ. ತಾನು ದೊಡ್ಡವರ ಮನೆ ಹುಡುಗಿಯೆಂದು ವಿಪರೀತವಾಗಿ ಆಡುತ್ತಿದ್ದಾಳೆ.''

''ನೀವು ಹೋಗದೆ ಅವಳು ಬರುವುದಿಲ್ಲ ''

''ಬರದೇ ಎಲ್ಲಿಗೆ ಹೋಗುತ್ತಾಳೆ. ಅಹಂಕಾರಕ್ಕೆ ಉದಾಸೀನವೇ ಮದ್ದು.''

"ಕಾಮಾಕ್ಷಿ ಗುಣ ನಿಮಗಿನ್ನೂ ಗೊತ್ತಾಗಿಲ್ಲ, ಅವಳ ಮನಸ್ಸು ಹೂವಿನಂತೆ ಮೃದು—ಆದರೆ ವಜ್ರದಂತೆ ಕಠಿಣ."

"ಆಗಲಿ ನಾನು ನೋಡಿಯೇ ಬಿಡುತ್ತೇನೆ. ಈ ಅಹಂಕಾರ ಎಷ್ಟು ದಿವಸವಿರತ್ತೆ ಅನ್ನೋದನ್ನ"

"ಇದೊಂದೂ ಚೆನ್ನಾಗಿಲ್ಲ. ನಿಮ್ಮ ಮನಸ್ಸು ಬಂದಹಾಗೆ ಮಾಡಿಕೊಳ್ಳಿ"

ಎಂದು ಮುನಿಸಿಕೊಂಡು ಒಳಗೆ ಹೋದಳು. ನರಸಿಂಹಮೂರ್ತಿ ಬಂದು ಹೇಳಿದ. ಅವನ ಮಾತಿಗೂ ಶ್ರೀನಿವಾಸ ಯಾವ ಬೆಲೆಯನ್ನೂ ಕೊಡಲಿಲ್ಲ.

ಕಾಮಾಕ್ಷಿ ಗೌರಿ ಮನೆಗೆ ಹೋದಾಗ ಫಣಿಯಮ್ಮ ಊರಿನಲ್ಲಿರಲಿಲ್ಲ. ಅವರು ಬಂದು ಈ ಸುದ್ದಿ ಕೇಳಿ ಕೆಂಡಕೆಂಡವಾದರು.

"ಮನೆಗೆ ಬಂದೋರೆಲ್ಲಾ ರಾಣೀರಾಗಿ ಬಿಡುತ್ತಾರೆ. ಅವಳೂ ಹಾಳಾಗಿ ಹೋಗಲಿ. ಶೀನೂ—ಇಬ್ಬರನ್ನೂ ಬಿಟ್ಟುಬಿಡೋ, ಬೇರೆಕಡೆ ಒಳ್ಳೆ ಹುಡುಗಿ ತಂದು ನಾನು ಮದುವೆ ಮಾಡಿಸ್ತೀನಿ" ಎಂದರು. ಶ್ರೀನಿವಾಸ ತಾಯಿಯ ಮಾತು ಕೇಳಿ ನಕ್ಕು

"ಸಾಕಮ್ಮ. ಈ ಮದುವೆ ಅನಾಹುತ" ಎಂದ.

## ೨೫

ಕೈಯಲ್ಲಿ ಒಂದು ಗಂಟು ಹಿಡಿದುಕೊಂಡು ಕಾಮಾಕ್ಷಿ ಬಂದುದನ್ನು ಕಂಡು ರಂಗಮ್ಮ ಆಶ್ಚರ್ಯಚಕಿತರಾದರು.

"ಇದೇನೆ ತಾಯಿ."

ಕಾಮಾಕ್ಷಿ ಬಂದು ಕಾಲು ಮುಟ್ಟಿ ನಮಸ್ಕಾರ ಮಾಡಿ

"ನಿಮ್ಮ ಕೊನೇ ಮಗಳು ತೌರುಮನೆಗೆ ಬಂದಿದ್ದಾಳಮ್ಮಾ"

"ಬಾ ತಾಯಿ, ಬಾ"

ಎಂದು ವಿಶ್ವಾಸದಿಂದ ಒಳಕ್ಕೆ ಕರೆದೊಯ್ದರು. ಕಾಮಾಕ್ಷಿ ತನ್ನ ಬಟ್ಟೆ ಗಂಟನ್ನು ಒಂದು ಕಡೆ ಇಟ್ಟು ಗೌರನ ಕೋಣೆಗೆ ಹೋದಳು ಗೌರನ ಹಾಸಿಗೆಯ ಮೇಲೆ ಕುಳಿತು ಮೆಲ್ಲನೆ ಅವಳ ತಲೆಯನ್ನೆತ್ತಿ ತೊಡೆಯ ಮೇಲಿಟ್ಟುಕೊಂಡು ಮೃದುವಾಗಿ

"ಗೌರಕ್ಕ" ಎಂದಳು.

"ಯಾರು? ಕಾಮಾಕ್ಷಮ್ಮನೇ"

"ಹೌದು—ನಾನೇ ಗೌರಕ್ಕ."

"ನನ್ನ ಕರೆದುಕೊಂಡು ಹೋಗುವುದಕ್ಕೆ ಬಂದಿರಾ."

"ಹೂ. ನಾನಿಲ್ಲೇ ನೀನು ಗುಣವಾದದ್ದು ನೋಡಿಕೊಂಡು ಕರೆದುಕೊಂಡು ಹೋಗುತ್ತೇನೆ."

"ನಿಜವೇ—ನೀವು ಇಲ್ಲೇ ಇರುತ್ತೀರಾ?"

"ಸತ್ಯ ಗೌರಕ್ಕ. ನಿಮ್ಮ ಬಳಿ ಬಿಟ್ಟು ನಾನು ಕದಲುವುದಿಲ್ಲ. ಅಲ್ಲಿ ನೋಡಿ ನನ್ನ ಬಟ್ಟೆ ಗಂಟು."

"ಅಕ್ಕಾ, ದೇವರಿದ್ದಾನೆ ಎನ್ನೋದು ನಿಜ ಅಲ್ಲವೇ. ನೀವು ಬಂದುದಕ್ಕೆ ಅವರು ಕೋಪಿಸಿಕೊಳ್ಳುವುದಿಲ್ಲವೇ?"

"ಕೋಪವೇಕೆ? ಅವರೇ ಕಳಿಸಿರುವಾಗ."

"ಅಕ್ಕಾ............ನೀವು ಈ ಲೋಕಕ್ಕೆ ಸೇರಿದವರಲ್ಲ."

"ಈಗ ಮೈಯಲ್ಲಿ ಹೇಗಿದೆ ಗೌರಾ."

"ನನಗೇನಾಗಿದೆ? ಸುಮ್ಮನೆ ಔಷಧ ಕುಡಿಸುತ್ತಾರೆ. ಇನ್ನು ಮೇಲೆ ನಾನು ಔಷಧ ಕುಡಿಯುವುದಿಲ್ಲ."

"ಬೇಡ. ಬಿಟ್ಟುಬಿಡಿ."

"ಅಕ್ಕ. ನಾವು ಯಾವಾಗ ಅಲ್ಲಿಗೆ ಹೋಗೋದು."

"ನೀನು ಚೇತರಿಸಿಕೊಂಡು ಎದ್ದ ಕೂಡಲೆ."

ಕಾಮಾಕ್ಷಿ ಬಂದುದನ್ನು ತಿಳಿದು ಸೀತಮ್ಮ, ಕೇಶವಯ್ಯನೂ ಅಲ್ಲಿಗೇ ಬಂದರು. ಗೌರೀಗೆ ಹೊಸಜೀವ ಬಂದಂತಾಯಿತು. ನಾಲ್ಕಾರು ದಿವಸಗಳಲ್ಲಿ ಅವಳು ಎದ್ದು ಮೆಲ್ಲಗೆ ಮನೆಯಲ್ಲಿಯೇ ನಡೆಯುವಂತಾದಳು

ಸುಶೀಲ ತಪ್ಪದೆ ಪ್ರತಿದಿನ ಬಂದು ಮನೆಯಲ್ಲಿ ನಡೆಯುತ್ತಿದ್ದುದನ್ನು ಕಾಮಾಕ್ಷಿಗೆ ವರದಿ ಒಪ್ಪಿಸುತ್ತಿದ್ದಳು.

"ಇಲ್ಲಿಗೆ ಬರುವ ಯೋಚನೆಯೇ ಇಲ್ಲವೇ?"

"ಅತ್ತೆ ಮಾವನವರು ಇಬ್ಬರೂ ಊರಿನಿಂದ ಬಂದರು. ನೀವು ಹೋದ್ದು

ಕೇಳಿ ಅವರೂ ರೇಗಿದರು. ನಿನ್ನ ಯಜಮಾನರಂತೂ ಬೆಂಕಿನಪಾಬರಾಗಿ ಬಿಟ್ಟಿದ್ದಾರೆ.''

''ಸುಶೀಲಕ್ಕ, ಅವರಿಗೆ ಒಂದು ಕಾಗದ ಬರೆದುಕೊಡುತ್ತೇನೆ. ತೆಗೆದು ಕೊಂಡುಹೋಗಿ ಕೊಡುವಿರಾ ?''

''ಅದಕ್ಕೇನು, ಅವಶ್ಯಕವಾಗಿ ಆಗಲಿ.''

ಕಾಮಾಕ್ಷಿ ಬರೆದು ಸುಶೀಲನ ಕೈಗಿತ್ತಳು.

ಸುಶೀಲ ಕೊಟ್ಟ ಕಾಗದ ಶ್ರೀನಿವಾಸ ಓದಿಕೊಂಡ.

"ಪತಿದೇವರ ಚರಣಕಮಲಗಳಿಗೆ ದಾಸಿ ಕಾಮಾಕ್ಷಿಯ ಅನಂತ ನಮಸ್ಕಾರಗಳು.

ನಿಮಗೆ ಹೇಳದೆ ಇಲ್ಲಿಗೆ ಬಂದುದಕ್ಕೆ ನಿಮಗೆ ತುಂಬ ಕೋಪಬಂದಿರ ಬಹುದು. ನಾನು ಹಲವು ವಿಧದಲ್ಲಿ ನಿಮ್ಮನ್ನು ಪ್ರಾರ್ಥಿಸಿದೆ. ಗೌರಕ್ಕನಿಗಾಗಿರುವ ಅನ್ಯಾಯ ಸರಿಪಡಿಸಿರೆಂದು. ನೀವು ಕಿವಿಯ ಮೇಲೆ ಹಾಕಿಕೊಳ್ಳಲಿಲ್ಲ. ನನಗೆ ಈ ದಾರಿಬಿಟ್ಟು ಬೇರೆ ದಾರಿ ತೋರಲಿಲ್ಲ. ನಾನು ಇಲ್ಲಿಗೆ ಬಂದುದನ್ನು ಕೇಳಿ ನೀವು ಕೂಡಲೆ ಬಂದು ನನ್ನನ್ನು ಕರೆದುಕೊಂಡು ಹೋಗುವಿರೆಂದು ಲೆಕ್ಕ ಹಾಕಿದೆ, ನನ್ನ ಲೆಕ್ಕ ತಪ್ಪಿತು. ನಾನು ಬಂದು ಐದು ದಿವಸಗಳಾದವು, ನೀವು ಸುಳಿಯಲಿಲ್ಲ. ನಾನು ನಿಮಗೆ ಬೇಡವಾದೆನೇ ? ನನ್ನ ಪ್ರಾಣ ನೀವು. ಆದರೆ ನಿಮ್ಮಿಂದ ಅನ್ಯಾಯವಾಗಬಾರದು--ಗೌರಿಗೆ ಹಿಂಸೆಯಾಗಬಾರದೆಂದು ನನ್ನ ಹಂಬಲ. ಗಂಡನ ಧರ್ಮಕಾಯುವುದು ಹೆಂಡತಿಯ ಕರ್ತವ್ಯವಲ್ಲವೇ ?

ನೀವು ತಿಳಿದವರು ವಿದ್ಯಾವಂತರು ನಿಮಗೆ ಹೇಳುವಷ್ಟು ಯೋಗ್ಯತೆ ನನ್ನಲ್ಲಿಲ್ಲ. ಆದರೆ ಹಟಕ್ಕಾಗಿ ನಮ್ಮ ಕೈ ಬಿಡಬೇಡಿ. ನನ್ನ ಆತ್ಮಸಾಕ್ಷಿಯಾಗಿ ಹೇಳುತ್ತೇನೆ. ನಾನಾಗಲಿ ಗೌರಿಯಾಗಲಿ ತಪ್ಪಿತಸ್ಥರಲ್ಲ.

ಗೌರಿ ಬಹಳ ದೊಡ್ಡ ಜೀವ. ನನ್ನ ಕಣ್ಣಿಗೆ ಅವಳು ಒಬ್ಬ ತಪಸ್ವಿನಿ—ಮಹಾ ಪತಿವ್ರತೆ. ಅವಳ ಕನಸುಮನಸಿನಲ್ಲಿಯೂ ನಿಮ್ಮದೇ ಧ್ಯಾನ. ಪತಿಪ್ರಾಣೆ ಗೌರೀಗೆ ಅನ್ಯಾಯಮಾಡಬೇಡಿ. ಅದು ತುಂಬ ನೊಂದ ಜೀವ. ಅದಕ್ಕೆ ಶಾಂತಿ, ತೃಪ್ತಿ, ಸಂತೋಷ ನೀಡಬೇಕಾದುದು ನಿಮ್ಮ ಧರ್ಮ.

ಇಷ್ಟು ಬರೆದೆನೆಂದು ನನ್ನಮೇಲೆ ಮತ್ತಷ್ಟು ಕೋಪಮಾಡಿಕೊಳ್ಳ ಬೇಡಿ. ದಯಮಾಡಿ ಇಲ್ಲಿಗೆ ಬನ್ನಿ. ಇಲ್ಲಿ ಎರಡು ಆರ್ತಜೀವಿಗಳು ನಿಮಗಾಗಿ ಕಾದಿವೆ. ನಿಮ್ಮ ಸೇವೆ ಮಾಡಲು ಹಾತೊರೆಯುತ್ತಿವೆ.

ಇಂತು ನಿಮ್ಮ ಚರಣದಾಸಿ,

**ಕಾಮಾಕ್ಷಿ**

ಶ್ರೀನಿವಾಸ ತನ್ನ ಕೋಪವನ್ನೆಲ್ಲಾ ಕಾಗದದ ಮೇಲೆ ತೋರಿಸಿ ಅದನ್ನು ಚಿಂದಿಚಿಂದಿಯಾಗಿ ಹರಿದು ಹಾಕಿದ.

ಮಾರನೆಯ ದಿನ ಗೌರಿಯನ್ನು ನೋಡಲು ಬಂದ ಸುಶೀಲ ಕಾಗದಕ್ಕಾದ ಮರ್ಯಾದೆಯನ್ನು ಕಾಮಾಕ್ಷಿಗೆ ತಿಳಿಸಿದಳು. ಕಾಮಾಕ್ಷಿ ಭೂಮಿಗಿಳಿದು ಹೋದಳು.

"ಈ ಸುದ್ದಿ ಗೌರೀಗೆ ಹೇಳಬೇಡಿ ಅಕ್ಕ."

"ಉಂಟೇ? ಹೇಳುವುದಿಲ್ಲಮ್ಮ—ಮುಂದೇನುಗತಿ ಕಾಮಾಕ್ಷಿ."

"ನಾನು ಇಲ್ಲಿಂದ ಕದಲುವುದಿಲ್ಲ ಅಕ್ಕ. ಅವರು ಎಂದು ಬರುತ್ತಾರೋ ಬರಲಿ—ಚೆನ್ನಾಗಿದ್ದಾರಷ್ಟೆ."

"ಚೆನ್ನಾಗಿದ್ದಾರೆ. ಆದರೆ ಅವರ ಮನಸ್ಸಿಗೂ ನೆಮ್ಮದಿಯಿಲ್ಲ. ತಾಯಿಗೂ ಮಗನಿಗೂ ಹತ್ತಿದ ಜಗಳ ಹರಿಯುವುದಿಲ್ಲ."

"ಇಷ್ಟಾದರೂ ತಾಯಿಗೆ ಬುದ್ಧಿ ಬಂದಿಲ್ಲವಲ್ಲ."

"ಆ ಮುಕ್ಕನಿಗೆ ಈ ಜನ್ಮಕ್ಕೆ ಬುದ್ಧಿ ಬರುವುದಿಲ್ಲ."

"ನಿಮ್ಮ ಯಜಮಾನರು ಮನಸ್ಸುಮಾಡಿದರೆ ಅವರನ್ನು ಇಲ್ಲಿಗೆ ಕರೆದು ಕೊಂಡು ಬರಬಹುದು."

"ಅದೂ ಆಯಿತಮ್ಮ. ಅಣ್ಣತಮ್ಮ ಈಗ ಮಾತೂಕೂಡ ಆಡುವುದಿಲ್ಲ. ಕಾಮೂ, ನನ್ನ ಮಾತು ಕೇಳು. ಈಗ ನನ್ನ ಜತೆ ಹೊರಡು. ನೀನು ಶ್ರೀನಿ ವಾಸನ ಜತೆಯಿದ್ದು ಅವನ ಮನಸ್ಸನ್ನು ತಿದ್ದಬಲ್ಲೆ"

"ಅಕ್ಕ, ಅವುಗಳನ್ನೆಲ್ಲಾ ಯೋಚಿಸದೆ ನಾನು ಇಲ್ಲೀಗೆ ಬಂದೆ ಎಂದು ಕೊಂಡಿರುವಿರಾ?"

"ಇಲ್ಲ. ಸರಿಯೇ ಆದರೂ...."

"ಇನ್ನು ನಾನೊಬ್ಬಳೇ ಆ ಹೊಸಲು ತುಳಿಯುವುದಿಲ್ಲ ಸುಶೀಲಕ್ಕ."

“ಮನೆ ಸ್ಮಶಾನವಾಗಿದೆ ಕಾಮೂ.”

“ನನ್ನ ಮನಸ್ಸೂ ಸ್ಮಶಾನವಾಗಿದೆ ಅಕ್ಕಾ. ಅವರ ಮುಖ ನೋಡಿ ಆರು ದಿವಸವಾಯಿತು.”

ಕಾಮಾಕ್ಷಿಗೆ ದುಃಖ ತಡೆಯುವುದಾಗಲಿಲ್ಲ. ಸುಶೀಲ ಅಲ್ಲಿ ನಿಲ್ಲಲು ಸಾಧ್ಯವಾಗಲಿಲ್ಲ.

ಶುಕ್ಲಪಕ್ಷ ಹುಟ್ಟಿತು. ಸೊಗಸಾದ ಬೆಳದಿಂಗಳು. ತನ್ನನ್ನು ಕಾಡುವುದಕ್ಕೆ ಬೆಳದಿಂಗಳು ಮೂಡಿದೆಯೆಂದು ಕಾಮಾಕ್ಷಿ ಭಾವಿಸಿದಳು. ಎಷ್ಟೋ ಬಾರಿ ‘ಗೌರಿಯನ್ನು ಕರೆದುಕೊಂಡು ಹೊಸಪೇಟೆಗೆ ಹೋಗಿಬಿಡಲೇ’ ಎಂದು ಯೋಚಿಸಿದಳು. ಮರುಕ್ಷಣವೇ ‘ಛೆ! ಸೋತ ಮುಖಹಾಕಿಕೊಂಡು ತಂದೆ ತಾಯಿಯನ್ನು ಹೇಗೆ ನೋಡಲಿ’ ಎಂದುಕೊಂಡಳು.

ಕಾಮಾಕ್ಷಿ ಮತ್ತೊಮ್ಮೆ ಗಂಡನಿಗೆ ಕಾಗದ ಬರೆದು ಕಳುಹಿಸಿದಳು. ಅದಕ್ಕೂ ಉತ್ತರ ಬರಲಿಲ್ಲ ಗಂಡನಿಂದ ಉತ್ತರ ಪಡೆಯುವ ನಿರೀಕ್ಷೆಯನ್ನು ಬಿಟ್ಟುಬಿಟ್ಟಳು.

ಗೌರೀಗೆ ದಿನದಿನಕ್ಕೆ ಗುಣವಾಗುತ್ತ ಬಂತು. ಕಾಮಾಕ್ಷಿ ಮಾತ್ರ ಸೊರಗುತ್ತ ಬಂದಳು. ಬಾಯಲ್ಲಿ ಸದಾ ಪ್ರಿಯಮಾತು, ಮುಖದಲ್ಲಿ ಸದಾ ಮುಗುಳ್ನಗೆ. ಗೌರೀಗೆ ಯಾವ ಡಾಕ್ಟರೂ ಬೇಕಾಗಿರಲಿಲ್ಲ. ಕಾಮಾಕ್ಷಿ ಅವಳ ಭಾಗಕ್ಕೆ ಧನ್ವಂತರಿಯಾದಳು

ಕಾಮಾಕ್ಷಿ ರಂಗಮ್ಮನವರ ಮನೆಗೆ ಬಂದು ಮೂರು ವಾರಗಳು ಕಳೆದವು. ಹೀಗೇ ಮೂರು ತಿಂಗಳು—ಮೂರುವರ್ಷ ಕಳೆದುಹೋಗುತ್ತದೆ ಎಂದುಕೊಂಡಳು ಕಾಮಾಕ್ಷಿ

ಬಹಳ ದಿವಸಗಳ ಮೇಲೆ ಗೌರಿ ತಾಯಿಗೆ ಹೇಳಿದಳು “ಅಮ್ಮಾ ಎಲ್ಲರೂ ಕುಳಿತು ಸಂತೋಷವಾಗಿ ಊಟಮಾಡಿ ಬಹಳ ದಿವಸವಾಯ್ತು. ಇವತ್ತು ಬೆಳದಿಂಗಳು ಚೆನ್ನಾಗಿದೆ. ಸೊಗಸಾಗಿ ಅಡಿಗೆ ಮಾಡು. ಸೀತಕ್ಕ, ಭಾವಯ್ಯನಿಗೂ ಹೇಳಿಕಳುಹಿಸು.”

ರಂಗಮ್ಮ ಅದನ್ನು ಕೇಳಿ ಹಿರಿಹಿರಿ ಹಿಗ್ಗಿದರು. ಮಗಳು ಇಷ್ಟರ ಮಟ್ಟಿಗಾದಳಲ್ಲಾ ಎಂಬುದೇ ಅವರ ಸಂತೋಷಕ್ಕೆ ಕಾರಣ.

ರಾತ್ರಿ ಎಲ್ಲರೂ ಊಟಕ್ಕೆ ಕುಳಿತು ಸಂತೋಷವಾಗಿ ಊಟಮಾಡಿದರು. ಕಾಮಾಕ್ಷಿ ಎಲ್ಲರನ್ನೂ ಉಪಚರಿಸಿ, ಎಲ್ಲರೂ ಹೆಚ್ಚುಹೆಚ್ಚು ಖೀರು ಕುಡಿಯುವಂತೆ ಮಾಡಿದಳು. ಅವಳು ನಿಜವಾಗಿಯೂ ಲಕ್ಷ್ಮಾಧೀಶ್ವರನ ಮಗಳೇ ಎಂದು ಎಲ್ಲರೂ ಆಶ್ಚರ್ಯಪಟ್ಟರು.

ಗೌರಿ ತೃಪ್ತಿಯಿಂದ ಊಟಮಾಡಿದುದನ್ನು ಕಂಡು ಕಾಮಾಕ್ಷಿಗೆ ಸಮಾಧಾನವಾಯಿತು. ಸೀತಕ್ಕನೂ ಅದನ್ನು ಗಮನಿಸದಿರಲಿಲ್ಲ. ಊಟ ಮುಗಿದ ಮೇಲೆ

"ಕಾಮಾಕ್ಷಮ್ಮ, ಗೌರಿ ಯಾವದೋ ಜನ್ಮದಲ್ಲಿ ನಿಮ್ಮ ಮಗಳಾಗಿದ್ದಳು ಕಣ್ರೀ. ನೀವು ಬರುತ್ತಲೇ ಅವಳ ಕಾಹಿಲೆ ಓಡಿಹೋಯ್ತು. ಅವಳು ಹೀಗಾಗುತ್ತಾಳೆ ಎಂತ ನಾವು ಕನಸುಮನಸಿನಲ್ಲಿಯೂ ಎಣಿಸಿರಲಿಲ್ಲ."

"ಸೀತಕ್ಕ—ಸ್ತ್ರೀಸುಕ್ಕಿಂತ ದೊಡ್ಡ ದೇವರಿಲ್ಲ ಎಂದು ನಾನು ಎಲ್ಲಿಯೋ ಓದಿದ್ದೆ. ಆ ಮಾತು ಎಷ್ಟು ನಿಜ."

"ಶ್ರೀನಿವಾಸರಾಯರು ಬೇರೆ ಮದುವೆಯಾದ ಸುದ್ದಿ ಕೇಳಿ ನಾವೆಲ್ಲಾ ಕೋಪಮಾಡಿಕೊಂಡೆವು. ನಿಮ್ಮನ್ನು ನೋಡಿದ ಮೇಲೆ ಕೋಪ ತಾನೇ ತಾನಾಗಿ ಹೋಯಿತು. ಇಂಥ ಮದುವೆ ಅವರು ಇನ್ನು ನಾಲ್ಕು ಮಾಡಿಕೊಂಡರೂ ನಾವು ಬೇಡವೆನ್ನುವುದಿಲ್ಲ."

"ಕಾಮಾಕ್ಷಿಯಂಥವರು ನಾಲ್ಕು ಜನ ಸಿಕ್ಕುತ್ತಾರೆಯೇ ಸೀತಕ್ಕ"

ಎಂದು ಗೌರಿ ಕೇಳಿದಳು.

"ನೀನು ನನ್ನ ಹೊಗಳಿದರೆ ನನಗೆ ಸಿಟ್ಟುಬರುತ್ತಮ್ಮ" ಎಂದಳು ಕಾಮಾಕ್ಷಿ.

"ಏಕೆ? ಎಲ್ಲರೂ ಹೊಗಳಬಹುದು, ನಾನು ಮಾತ್ರ ಹೊಗಳಬಾರದೋ?"

"ಯಾರೂ ಹೊಗಳಬಾರದು."

"ಹುಡುಗರು ಹೇಳೋಹಾಗೆ ನಾನು ನಿನಗೆ 'ಎಮ್ಮಿ'ಯೇ (Enemy) ಕಾಮೂ."

"ಹೂ—ನೀವು ನನ್ನ ಎಮ್ಮಿ—ನನ್ನ ಶತ್ರು—ನನ್ನ ಸವತಿ."

"ಏನು ಸವತಿಯರು ವ್ಯಾಜ್ಯಕಾಯುವುದಕ್ಕೆ ಶುರುಮಾಡಿದರಲ್ಲಾ."

ಎಂದು ಸೀತಾ ಕೇಳಿದಳು.

"ಎಷ್ಟು ದಿವಸ ಸೀತಕ್ಕ ನಾವು ಅನ್ಯೋನ್ಯವಾಗಿರೋದು. ಬೇಜಾರು ಕಳೆಯುವುದಕ್ಕೆ ಆಗಾಗ್ಗೆ ವ್ಯಾಜ್ಯವಾಡುತ್ತೇವೆ"

ಎಂದು ಕಾಮಾಕ್ಷಿ ಹೇಳಲು

"ನಿನ್ನ ಕೈಲಿ ವ್ಯಾಜ್ಯ ಕಾಯುವುದಕ್ಕೆ ಆಗೋದಿಲ್ಲ ಕಾಮಾಕ್ಷಿ—ಸುಮ್ಮನೆ ಆ ಪ್ರಯತ್ನ ಏಕೆಮಾಡುತ್ತೀ."

ಎಂದು ಸೀತಮ್ಮ ಸೂಚಿಸಿದಳು.

ರಾತ್ರಿ ಬಹಳ ಹೊತ್ತು ಎಲ್ಲರೂ ವಿನೋದವಾಗಿ ಮಾತನಾಡುತ್ತ ಕುಳಿತಿದ್ದರು. ರಾತ್ರಿ ಒಂದು ಹೊಡೆಯಿತು. ರಂಗಪ್ಪ ಬಂದು

"ಏಳಿರಮ್ಮ—ಮಲಗಿಕೊಳ್ಳಿ— ಒಂದು ಹೊಡೆಯಿತು."

ಎಂದು ಎಲ್ಲರನ್ನೂ ಎಬ್ಬಿಸಿದರು. ಕಾಮಾಕ್ಷಿ ಕೈಯಲ್ಲಿ ಲೆಟರ್ ಪ್ಯಾಡನ್ನೂ ಫೌಂಟನ್ ಪೆನ್ನನ್ನೂ ಹಿಡಿದು ಕುಳಿತಳು....ಸೀತಮ್ಮ

"ನಾವು ಮಲಗಬೇಕು, ನೀನು ಬರೆಯುತ್ತಾ ಕುಳಿತುಕೊಳ್ಳಬೇಕೋ" ಎಂದಳು.

"ಇಲ್ಲ ಸೀತಕ್ಕ——ತಂದೆಗೆ ಕಾಗದ ಬರೆದು ಬಹಳ ದಿವಸವಾಯ್ತು. ಬೆಳಗ್ಗೆ ಹೊತ್ತು ಪುರಸತ್ತೇ ಆಗಲ್ಲ. ಬೇಗ ಮುಗಿಸಿ ಮಲಗಿಕೊಳ್ಳುತ್ತೇನೆ. ಬೆಳಗ್ಗೆ ನಿಮ್ಮ ಯಜಮಾನರು ಹೊರಗೆ ಹೋಗುವಾಗ ಕೊಟ್ಟು ಟಪಾಲಿಗೆ ಹಾಕಿಸುತ್ತೀರಾ?"

"ಅದಕ್ಕೇನು ಆಗಲಿ."

ಕಾಮಾಕ್ಷಿ ಕಾಗದ ಬಹಳ ಹೊತ್ತು ಬರೆದಳು. ಬರೆದ ಕಾಗದವನ್ನೋದಿ ಹರಿದುಹಾಕಿ ಮತ್ತೆ ಬರೆದಳು. ಕಾಗದ ಮುಗಿಸಿ ಅವಳು ಮಲಗುವ ಹೊತ್ತಿಗೆ ೨|| ಗಂಟೆಯಾಯಿತು.

ಸ್ವಲ್ಪಹೊತ್ತು ಮಲಗಿ ಮತ್ತೆ ಎದ್ದಳು. ಏಕೋ ನಿದ್ರೆ ಹತ್ತಲಿಲ್ಲ. ಬಚ್ಚಲುಮನೆಗೆ ಹೋಗಿಬಂದು ಮಲಗಿದಳು. ಸುಖವಾಗಿ ನಿದ್ರೆ ಹತ್ತಿತು.

## ೨೬

ಯಥಾವಿಧಿಯಂತೆ ರಂಗಮ್ಮ ಬೆಳಿಗ್ಗೆ ಎಲ್ಲರಿಗಿಂತ ಮುಂಚೆಯೆದ್ದು ಮುಸುರೆಪಾತ್ರೆ ಹೊರಗೆ ಹಾಕಿ, ಮನೆಮುಂದೆ ಸಾರಿಸಿ ರಂಗವಲ್ಲಿ ಇಕ್ಕಿದರು. ಹಾಲಿನವನು ಬರಲು. ಕಾಫಿ ಒಲೆ ಹಚ್ಚಿ, ಕಾಫಿ ಸಿದ್ಧಗೊಳಿಸಿ ಎಲ್ಲರನ್ನೂ ಎಬ್ಬಿಸಿದರು. ಕಾಮೂ ರಾತ್ರಿ ಬಹಳ ಹೊತ್ತು ಎಚ್ಚರವಾಗಿದ್ದಳೆಂದು ಅವಳನ್ನು ಎಬ್ಬಿಸಹೋಗಲಿಲ್ಲ.

ಎಂಟಾಯಿತು—ಒಂಭತ್ತಾಯಿತು—ಕಾಮು ಏಳಲೇ ಇಲ್ಲ.

“ ಸೀತಾ, ಕಾಮಾಕ್ಷಿಯನ್ನು ಎಬ್ಬಿಸು. ಊಟಮಾಡಿ ಮಧ್ಯಾಹ್ನ ಬೇಕಾದರೆ ತಿರುಗಿ ಮಲಗಿಕೊಳ್ಳಲಿ ” ಎಂದು ಹೇಳಿದರು.

ಸೀತಮ್ಮ ಕಾಮಾಕ್ಷಿಯ ಮುಸುಗೆಳೆದಳು. ಕಾಮಾಕ್ಷಿಯ ಮುಖ ನೋಡಿ ಚಿಟ್ಟನೆ ಚೀರಿದಳು. ರಂಗಮ್ಮ ಓಡಿಬಂದರು.

“ ಅಮ್ಮಾ....ಅಲ್ಲಿ ನೋಡು.”

ಸೀತಮ್ಮ ಚೀರಿದ್ದು ಕೇಳಿ ಸ್ನಾನಮಾಡುತ್ತಿದ್ದ ಗೌರಿ ಅರ್ಧದಲ್ಲಿಯೇ ಸೀರೆ ಸುತ್ತಿಕೊಂಡು ಓಡಿಬಂದಳು ರೂಮಿನಲ್ಲಿ ಬಟ್ಟೆ ಹಾಕಿಕೊಳ್ಳುತ್ತಿದ್ದ ಕೇಶವಯ್ಯನೂ ಓಡಿಬಂದ.

ರಂಗಮ್ಮ ಕಾಮಾಕ್ಷಿಯನ್ನು ನೋಡಿದರು. ಅದೇ ಸುಂದರವದನ. ಅದೇ ಶಾಂತಮುಖಮುದ್ರೆ—ಅದೇ ದಿವ್ಯ ಮಂದಸ್ಮಿತ—ಆದರೆ ಮುಖ ಕಪ್ಪಿಟ್ಟಿತ್ತು. ಅವಳ ಒಂದು ಕಿವಿಯಲ್ಲಿ ವಜ್ರದ ವಾಲೆಯಿರಲಿಲ್ಲ.

“ ಡಾಕ್ಟರನ್ನು ಕರೀರಿ ಅಂದ್ರೆ ”

ಎಂದು ರಂಗಮ್ಮ ಕೂಗಿದರು.

ಗೌರಿ ಕಾಮಾಕ್ಷಿಯ ತಲೆಯನ್ನು ತೊಡೆಯಮೇಲಿಟ್ಟುಕೊಂಡು ಕುಳಿತಳು. ಅವಳ ಕಣ್ಣಲ್ಲಿ ನೀರು ಧಾರಾಕಾರವಾಗಿ ಸುರಿಯುತ್ತಿತ್ತು.

ಡಾಕ್ಟರು ಬಂದುನೋಡಿ ತಲೆಯಲ್ಲಾಡಿಸಿದರು.

ಕೇಶವಯ್ಯ ಶ್ರೀನಿವಾಸನಿಗೆ ಸುದ್ದಿ ಮುಟ್ಟಿಸಲು ಓಡಿದ.

ಮನೆ ಒಂದೇ ಗಳಿಗೆಯಲ್ಲಿ ದುಃಖದಲ್ಲಿ ಮುಳುಗಿತು. ಸೀತಮ್ಮ, ರಂಗಮ್ಮ ಗೋಳುಗರೆದರು. ಗೌರಿ ಕಾಮಾಕ್ಷಿಯ ಮುಖವನ್ನು ದಿಟ್ಟಿಸಿ

ನೋಡಿ "ನಿನ್ನ ಲೋಕಕ್ಕೆ ಹೊರಟುಹೋದೆಯಾ ತಂಗೀ. ನಮ್ಮ ಸಹವಾಸ ಸಾಕಾಯಿತೇ?" ಎಂದಳು.

ಶ್ರೀನಿವಾಸ ಫಣಿಯಮ್ಮ, ವೆಂಕಟಾಚಲಯ್ಯ, ನರಸಿಂಹಮೂರ್ತಿ, ಸುಶೀಲ ಎಲ್ಲರೂ ಕೇಶವಯ್ಯನೊಂದಿಗೆ ಬಂದರು.

ಮಲಗಿ ಗಾಢನಿದ್ರೆಯಲ್ಲಿ ಪರವಶಳಾಗಿದ್ದ ಕಾಮಾಕ್ಷಿಯ ದಿವ್ಯಮುಖವನ್ನು ಎಲ್ಲರೂ ನೋಡಿದರು. ಆ ವೇಳೆಗೆ ಜನದ ಜಾತ್ರೆ ಸೇರಿತು. ಸೀತಮ್ಮ ಹಾಸಿಗೆಯಂಚಿನಲ್ಲಿ ಕೈಯಾಡಿಸಿ ಒಂದು ಪತ್ರ ತೆಗೆದು ಶ್ರೀನಿವಾಸನ ಕೈಗಿತ್ತಳು. ತಂದೆಗೆ ಕಾಗದ ಬರೆಯಬೇಕೆಂದು ಕಾಮಾಕ್ಷಿ ಹೇಳಿ ಗಂಡನಿಗೆ ಕಾಗದ ಬರೆದಿಟ್ಟಿದ್ದಳು;

"ಸ್ವಾಮಿ,

ಇದೋ ನನ್ನ ಕೊನೆಯ. ನಮಸ್ಕಾರ. ಕೊನೆಗೂ ನಿಮ್ಮ ದಾಸಿಗೆ ನಿಮ್ಮ ಸೇವೆಯ ಭಾಗ್ಯಸಿಕ್ಕಲಿಲ್ಲ. ನಾಳೆ ನಾನು ನಿಮ್ಮೊಂದಿಗಿರುವುದಿಲ್ಲ. ಎಲ್ಲಗೆ ಹೋಗುತ್ತೇನೋ ಕಾಣೆ. ಆದರೆ ಹೋಗಲು ಭಯವಿಲ್ಲ.

ನನ್ನ ಕೊನೆಯ ಪ್ರಾರ್ಥನೆ ನೆರವೇರಿಸಿ. ಗೌರಿಯನ್ನು ಕಾಪಾಡಿ. ಅವಳ ಕೈಬಿಡಬೇಡಿ.

ನಾನು ನಿಮ್ಮನ್ನು ಬಿಟ್ಟುಹೋದೆನೆಂದು ದುಃಖಿಸಬೇಡಿ. ನಾನು ಹೋಗಿಲ್ಲ. ಗೌರಿಯನ್ನು ನೀವು ನೋಡಿದರೆ ತಿಳಿಯುವಿರಿ—ಕಾಮೂ ಅವಳಲ್ಲಿ ಲೀನವಾಗಿದ್ದಾಳೆಂದು.

ನನಗಾಗಿ ಯಾರೂ ವ್ಯಥೆಪಡಬೇಡಿ. ಇಂದಲ್ಲ ನಾಳೆಯಾದರೂ ನಾವೆಲ್ಲಾ ಈ ಲೋಕಬಿಟ್ಟು ಹೋಗುವವರೇ. ಆಗಿ ಹೋದುದನ್ನು ಚಿಂತಿಸುತ್ತಾ ನಾವು ಇರುವ ಕೆಲಸ ಕೈಬಿಡಬಾರದು.

ನಮ್ಮ ತಂದೆ ತಾಯಿಗಳಿಗೆ ಒಂದು ಮಾತು ತಿಳಿಸಿ—ನಿಮ್ಮ ಮಗಳು ಗುರಿ ಮುಟ್ಟಿದಳೆಂದು.

ಸೀತಕ್ಕ, ಸುಶೀಲಕ್ಕ, ರಂಗಮ್ಮ ಎಲ್ಲಾ ನನ್ನ ಬಾಳಿಗೆ ಬೆಳಕುಕೊಟ್ಟರು ತಮ್ಮ ಪ್ರೀತಿಯಿಂದ ನನ್ನನ್ನು ಭಾಗ್ಯವಂತಳನ್ನಾಗಿ ಮಾಡಿದರು. ಗೌರಕ್ಕ—ನನ್ನ ಕೊರಗು ಹಚ್ಚಿಕೊಂಡು ನೀನು ದುಃಖಿಸಬೇಡ. ನಿನ್ನ ಆತ್ಮ-ದೇಹ ಎಲ್ಲಾ ನಿನ್ನ ಸ್ವಾಮಿಯದು. ಅವರ ವಸ್ತುವನ್ನು ಕೊರಗಿಸುವ ಅಧಿಕಾರ

ನಿನಗಿಲ್ಲ. ನೀನೂ ಅವರೂ ಸುಖಿಗಳಾಗಿರಿ. ನನ್ನ ಕುಲಸ್ವಾಮಿ ಹಂಪೆಯ ವಿರೂಪಾಕ್ಷ ನಿಮ್ಮನ್ನು ಸದಾ ಕಾಪಾಡಲಿ.

ಸ್ವಾಮಿ, ಇನ್ನು ನನಗೆ ಅಪ್ಪಣೆಕೊಡಿ. ಗೌರಿಯನ್ನು ಮಡಿಲಿಗೆ ಹಾಕಿ ಕೊಳ್ಳಿರೆಂದು ನಾನು ಬೇಡಿಕೊಂಡೆನೆಂದು ಅತ್ತೆಮ್ಮನವರಿಗೆ ತಿಳಿಸಿ. ನನ್ನ ಎಲ್ಲ ಅಪರಾಧಗಳನ್ನು ಮನ್ನಿಸಿ,

ಇಂತು ಎಂದೆಂದಿಗೂ ನಿಮ್ಮ ದಾಸಿ,

**ಕಾಮಾಕ್ಷಿ**

"**ಕಾಮೂ**" ಎಂದು ಶ್ರೀನಿವಾಸ ಅವಳ ಮೃತದೇಹದ ಮೇಲೆ ಬಿದ್ದುಬಿಟ್ಟ.

## ೨೭

ಕೇಶವಯ್ಯ ಹೊಸಪೇಟೆಗೆ ಎಕ್ಸ್‌ಪ್ರೆಸ್ ಟೆಲಿಗ್ರಾಂ ಮಾಡಿದ. ಆದರೆ ಗೋಪಾಲಯ್ಯ ಬರುವ ತನಕ ಮುಂದಿನ ವಿಧಿಗಳನ್ನು ತಡೆದಿರಲು ಸಾಧ್ಯ ವಾಗಲಿಲ್ಲ.

ದೇಹವನ್ನು ಸಾಗಿಸುವ ಹೊತ್ತಿಗೆ ಮಧ್ಯಾಹ್ನವಾಯಿತು. ಜನ ತಂಡ ತಂಡವಾಗಿ ನೆರೆದರು. ರಾಶಿರಾಶಿ ಕುಂಕುಮ, ಅರಿಶಿನ, ಹೂಗಳಿಂದ ಕಾಮಾಕ್ಷಿ ಯನ್ನು ಪೂಜಿಸಿದರು. ಜನ ನುಗ್ಗಿಬಂದು ಆಕೆಯ ಪಾದಮುಟ್ಟಿ ನಮಸ್ಕರಿ ಸಿದರು. ಮಕ್ಕಳ ತಾಯಂದಿರು ತಮ್ಮ ಎಳೆಕಂದಗಳನ್ನು ತಂದು ಕಾಮಾಕ್ಷಿ ಯ ಪಾದಗಳ ಮೇಲೆ ಹಾಕಿದರು.

ದೇಹಕ್ಕೆ ಸ್ನಾನಮಾಡಿಸಿ, ಶುಭ್ರ ಬಿಳಿಯ ಸೀರೆಯನ್ನುಡಿಸಿದರು. ಹಣೆಯ ತುಂಬ ಕುಂಕುಮ ಕೆನ್ನೆತುಂಬ ಅರಿಸಿನ, ಕೊರಳಲ್ಲಿ ಎರಡು ಎಳೆ ಕರಿಮಣಿ.

ಜನ ದೇಹವನ್ನೆತ್ತಲು ಸಿದ್ಧರಾದರು. ಗೌರಿ ಕಾಮಾಕ್ಷಿಯ ಪಾದ ಗಳನ್ನು ಬಿಗಿಯಾಗಿ ಅಪ್ಪಿದಳು. ಏನು ಮಾಡಿದರೂ ಅವಳು ಅದನ್ನು ಬಿಡ ಲೊಲ್ಲಳು. ಸುಶೀಲ ಗೌರಿಯನ್ನಪ್ಪಿಕೊಂಡು ಸಮಾಧಾನ ಹೇಳಿದಳು.

ವಾಹಕರು ಹೊರಡಲನುವಾದರು. ಗೌರಿ ಕೊನೆಯಸಲ ಕಾಮಾಕ್ಷಿಯ ಮುಖ ನೋಡಿ

"ಹೋಗಿ ಬರುತ್ತೀಯಾ ಮಹಾಸತಿ" ಎಂದಳು.

ಶ್ರೀನಿವಾಸನೂ ಜತೆಯಲ್ಲಿಯೇ ಹೊರಟ.

ಅವನು ಎಲ್ಲ ವಿಧಿಗಳನ್ನು ಮುಗಿಸಿಕೊಂಡು ನೇರವಾಗಿ ಸುಬ್ಬರಾಯರ ಮನೆಗೇ ಬಂದ. ಸುಬ್ಬರಾಯರು ಅಳಿಯನಿಗೆ ನೀರು ಹಾಕಿದರು.

ಕೇಶವಯ್ಯ ಶ್ರೀನಿವಾಸನಿಗೆ

"ಗೌರಿಯನ್ನು ಮನೆಗೆ ಕರೆದುಕೊಂಡು ಹೋಗುವಿರಾ ?" ಎಂದು ಕೇಳಿದ.

ಶ್ರೀನಿವಾಸನಿಗೆ ಮಾತು ಹೊರಟಲಿಲ್ಲ. ಗಂಟಲುಬ್ಬಿಬಂತು. ಕಣ್ಣಲ್ಲಿ ಧಾರಾವಾಹಿನಿ. ಕೇಶವಯ್ಯನು ಅವನ ತಲೆ ನೇವರಿಸಿ ಸಮಾಧಾನ ಹೇಳಿದ ಶ್ರೀನಿವಾಸ ತುಸು ಚೇತರಿಸಿಕೊಂಡು

"ನನ್ನ ದೇವಿಯಾಜ್ಞೆ ಹಾಗಿದೆ. ಅದನ್ನು ವಿರೋಧಿಸುವ ಶಕ್ತಿ ನನಗೆಲ್ಲಿದೆ ಕೇಶವಯ್ಯ" ಎಂದ.